RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**


| ಸಂಪುಟ ೧೪೯<br>**Volume 149** | ಬೆಂಗಳೂರು, ಗುರುವಾರ, ಜನವರಿ ೯, ೨೦೧೪ (ಪುಷ್ಯ ೧೯, ಶಕ ವರ್ಷ ೧೯೩೫)<br>**Bangalore, Thursday, January 9, 2014 (Pushya 19, Shaka Varsha 1935)** | ಸಂಚಿಕೆ ೨<br>**Issue 2** |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### COMMERCE & INDUSTRIES SECRETARIAT

**NO.CI 133 SPI 2011 BANGALORE DATED: 14.05.2012.**

**CORRIGENDUM**

**SUB:** Sanction of incentives and concessions to M/s Toyota Kirloskar Motors Ltd. Amendment to the Govt. Order No CI 218 SPI 97 Dated: 1.01.1998 reg.

**Ref:** 1. Government Order No CI 218 SPI 1997, Dated: 01-01-1998.

2. Cabinet approval Dated: 12.04.2012 at subject-5

In the Government Order No CI 218 SPI 1997, Dated: 01.01.1998, under Incentives & Concessions at para 4, the words ``Sales tax on finished goods (completely built unit)" shall be replaced by the words ``Sales tax on finished goods" enabling M/s Toyota Kirloskar Motors to avail deferment facility on sale of spare parts also.

By Order and in the name of the Governor of Karnataka,

**JYOTHI R.J.**

Desk Officer (Technical Cell)

Commerce & Industries Department.

**PR.1242**

### ಇಂಧನ ಸಚಿವಾಲಯ

**ಸಂಖ್ಯೆ: ಇಎನ್ 385 ಎನ್‌ಸಿಇ 2012 ಬೆಂಗಳೂರು, ದಿನಾಂಕ: 24.07.2013**

**ತಿದ್ದುಪಡಿ ಆದೇಶ**

ಸರ್ಕಾರದ ಆದೇಶ ಸಂಖ್ಯೆ : ಇಎನ್ 423 ಎನ್‌ಸಿಇ 2011 ದಿನಾಂಕ :13.01.2012 ರ ಆದೇಶ ಭಾಗದ ಕ್ರಮ ಸಂಖ್ಯೆ (2) ರ ಷರತ್ತಿನಲ್ಲಿ **"ಅಭಿವೃದ್ಧಿದಾರರು ಬೆಸ್ಕಾಂ ಹಾಗೂ ಹೆಸ್ಕಾಂನೊಂದಿಗೆ ತಲಾ 5.00 ಮೆ.ವ್ಯಾ. ವಿದ್ಯುತ್ತಿಗೆ ಸಂಬಂಧಿಸಿದಂತೆ (ಒಟ್ಟು 10.00ಮೆ.ವ್ಯಾ.) ವಿದ್ಯುತ್ ಖರೀದಿ ಒಪ್ಪಂದವನ್ನು (ಪಿಪಿಎ) ಮಾಡಿಕೊಳ್ಳತಕ್ಕದ್ದು".**

**ಎಂಬುದನ್ನು ಈ ಕೆಳಗಿನಂತೆ ತಿದ್ದಿ ಓದಿಕೊಳ್ಳತಕ್ಕದ್ದು.**

**" ಅಭಿವೃದ್ಧಿದಾರರು ಉತ್ಪಾದಿಸುವ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟಮಾಡಲು ಅನುಮತಿಸಿದೆ.".**

ಇನ್ನುಳಿದಂತೆ ಸದರಿ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ.ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**PR.1147**

**SC.50**

## ಇಂಧನ ಸಚಿವಾಲಯ

**ಸಂಖ್ಯೆ: ಇಎನ್ 155 ಎನ್‌ಸಿಇ 2013 ಬೆಂಗಳೂರು, ದಿನಾಂಕ: 18.07.2013**

**ತಿದ್ದುಪಡಿ ಆದೇಶ**

ಸರ್ಕಾರದ ಆದೇಶ ಸಂಖ್ಯೆ : ಇಎನ್ 258 ಎನ್‌ಸಿಇ 2012 ದಿನಾಂಕ :08.05.2013 ರ ಆದೇಶ ಭಾಗದ ಕ್ರಮ ಸಂಖ್ಯೆ (4) ರ ಷರತ್ತಿನಲ್ಲಿ **"ಸದರಿ ಯೋಜನೆಯನ್ನು ಆದೇಶ ಹೊರಡಿಸಿದ ದಿನಾಂದಿಂದ ಒಂದು ವರ್ಷದೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು".**

**ಎಂಬುದನ್ನು ಈ ಕೆಳಗಿನಂತೆ ತಿದ್ದಿ ಓದಿಕೊಳ್ಳತಕ್ಕದ್ದು.**

**"ಸದರಿ ಯೋಜನೆಯನ್ನು ದಿನಾಂಕ 07.05.2016 ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು".**

ಇನ್ನುಳಿದಂತೆ ಸದರಿ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

PR.1146
SC.50

## ಇಂಧನ ಸಚಿವಾಲಯ

**ಸಂಖ್ಯೆ: ಇಎನ್ 157 ಎನ್‌ಸಿಇ 2013 ಬೆಂಗಳೂರು, ದಿನಾಂಕ: 18.07.2013**

**ತಿದ್ದುಪಡಿ ಆದೇಶ**

ಸರ್ಕಾರದ ಆದೇಶ ಸಂಖ್ಯೆ : ಇಎನ್ 235 ಎನ್‌ಸಿಇ 2012 ದಿನಾಂಕ :08.05.2013 ರ ಆದೇಶ ಭಾಗದ ಕ್ರಮ ಸಂಖ್ಯೆ (4) ರ ಷರತ್ತಿನಲ್ಲಿ **"ಸದರಿ ಯೋಜನೆಯನ್ನು ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವರ್ಷದೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು".**

**ಎಂಬುದರ ಬದಲಾಗಿ ಈ ಕೆಳಗಿನಂತೆ ತಿದ್ದಿ ಓದಿಕೊಳ್ಳತಕ್ಕದ್ದು.**

**"ಸದರಿ ಯೋಜನೆಯನ್ನು ದಿನಾಂಕ 07.05.2016 ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು".**

ಇನ್ನುಳಿದಂತೆ ಸದರಿ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

PR.1145
SC.50

## ಇಂಧನ ಸಚಿವಾಲಯ

**ತಿದ್ದುಪಡಿ ಆದೇಶ ಸಂಖ್ಯೆ: ಇಎನ್ 154 ಎನ್‌ಸಿಇ 2013 ಬೆಂಗಳೂರು, ದಿನಾಂಕ: 18.07.2013**

ಸರ್ಕಾರದ ಆದೇಶ ಸಂಖ್ಯೆ : ಇಎನ್ 244 ಎನ್‌ಸಿಇ 2012 ದಿನಾಂಕ :08.05.2013 ರ ಆದೇಶ ಭಾಗದ ಕ್ರಮ ಸಂಖ್ಯೆ (4) ರ ಷರತ್ತಿನಲ್ಲಿ **"ಸದರಿ ಯೋಜನೆಯನ್ನು ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವರ್ಷದೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು".**

**ಎಂಬುದನ್ನು ಈ ಕೆಳಗಿನಂತೆ ತಿದ್ದಿ ಓದಿಕೊಳ್ಳತಕ್ಕದ್ದು.**

**"ಸದರಿ ಯೋಜನೆಯನ್ನು ದಿನಾಂಕ 07.05.2016 ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು".**

ಇನ್ನುಳಿದಂತೆ ಸದರಿ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

PR.1144
SC.50

## ಇಂಧನ ಸಚಿವಾಲಯ

**ವಿಷಯ:** ಮೆ॥ ಶ್ರೀ ಲಕ್ಷ್ಮೀ ನರಸಿಂಹ ಗ್ರೀನ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಜೈವಿಕ ಇಂಧನ ಘಟಕವನ್ನು ಸ್ಥಾಪಿಸಲು ನಿರಾಕ್ಷೇಪಣೆ ನೀಡುವ ಬಗ್ಗೆ.

**ಓದಲಾಗಿದೆ:** ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/03/F-200/2013-14/1320 ದಿನಾಂಕ: 5.06.2013.

**ಪ್ರಸ್ತಾವನೆ: –**

ಮೇಲೆ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಶ್ರೀ ಲಕ್ಷ್ಮೀ ನರಸಿಂಹ ಗ್ರೀನ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ಇವರಿಗೆ ಬಳ್ಳಾರಿ ಜಿಲ್ಲೆಯ ಶಿರಗುಪ್ಪಾ ತಾಲ್ಲೂಕಿನ ಶಿರುಗುಪ್ಪಾ ಗ್ರಾಮದಲ್ಲಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಜೈವಿಕ ವಿದ್ಯುತ್ ಘಟಕವನ್ನು ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡಬಹುದೆಂದು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 172 ಎನ್‌ಸಿಇ 2013, ಬೆಂಗಳೂರು, ದಿನಾಂಕ: 01.07.2013**

ಮೆ॥ ಶ್ರೀ ಲಕ್ಷ್ಮೀ ನರಸಿಂಹ ಗ್ರೀನ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ಇವರಿಗೆ ಬಳ್ಳಾರಿ ಜಿಲ್ಲೆಯ ಶಿರಗುಪ್ಪಾ ತಾಲ್ಲೂಕಿನ ಶಿರಗುಪ್ಪಾ ಗ್ರಾಮದಲ್ಲಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಜೈವಿಕ ವಿದ್ಯುತ್ ಘಟಕ ಸ್ಥಾಪಿಸಲು ಈ ಕೆಳಗಿನ ಷರತ್ತಿಗೊಳಪಟ್ಟು ನಿರಾಕ್ಷೇಪಣೆಯನ್ನು ನೀಡಿದೆ :–

1. ಅಭಿವೃದ್ಧಿದಾರರು ಕೆಪಿಟಿಸಿಎಲ್ ನಿಂದ ವಿದ್ಯುತ್ ರವಾನೆ ವ್ಯವಸ್ಥೆ ಸಂಬಂಧ (Evacuation of power) ಪ್ರತ್ಯೇಕ ಅನುಮೋದನೆ ಪಡೆಯತಕ್ಕದ್ದು
2. ಅಭಿವೃದ್ಧಿದಾರರು ಯೋಜನೆಯಿಂದ ಉತ್ಪಾದನೆಯಾಗುವ ವಿದ್ಯುತ್‌ನ್ನು ಸ್ವಂತಕ್ಕೆ ಬಳಕೆ ಮಾಡಿಕೊಳ್ಳಲು/ವಿಲೀಂಗ್ ಆಂಡ್ ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟ ಮಾಡಲು ಅನುಮತಿಸಿದೆ.
3. ಈ ಸ್ಥಾವರಕ್ಕೆ ಸಂಬಂಧಿಸಿದಂತೆ ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ/ಕಂದಾಯ/ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತಿತರ ಇಲಾಖೆಗಳಿಂದ ಅನುಮೋದನೆ ಪಡೆದುಕೊಳ್ಳತಕ್ಕದ್ದು.
4. ಈ ಸ್ಥಾವರ ಅನುಷ್ಠಾನಗೊಳಿಸುವ ಮುನ್ನ ಅಭಿವೃದ್ಧಿದಾರರು ವಿಸೃತ ಯೋಜನಾ ವರದಿಯನ್ನು (ಡಿ.ಪಿ.ಆರ್.) ತಯಾರಿಸಿ ಕ್ರೆಡಲ್ ಸಂಸ್ಥೆಯಿಂದ ಅನುಮೋದನೆ ಪಡೆಯತಕ್ಕದ್ದು.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

PR.1132
SC.25

## ಇಂಧನ ಸಚಿವಾಲಯ

**ವಿಷಯ:** ಶ್ರೀ ಬಿ.ಎಂ.ಫಾರುಖ್ ರವರಿಗೆ ವರ್ಗಾವಣೆಗೊಂಡಿದ್ದ 3.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ರದ್ದುಪಡಿಸಿ ಮೂಲ ಕಂಪನಿಯಾದ ಮೆ:: ಫಾರ್ಚುನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ಮತ್ತೆ ವರ್ಗಾಯಿಸುವ ಕುರಿತು.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 316 ಎನ್‌ಸಿಇ 2006 ದಿನಾಂಕ: 16.10.2006.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 254 ಎನ್‌ಸಿಇ 2011 ದಿನಾಂಕ: 10.06.2011.
3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/B.M.F-(3.00)-FFHPPL/2013/89 ದಿನಾಂಕ: 08.01.2013

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ಫಾರ್ಚುನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ಬಿಜಾಪುರ ಜಿಲ್ಲೆಯಲ್ಲಿ 62.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲಿನ ಆದೇಶದಲ್ಲಿ ಹಂಚಿಕೆಯಾಗಿರುವ ಒಟ್ಟು 62 ಮೆ.ವ್ಯಾ. ಸಾಮರ್ಥ್ಯದ ಅಂಶಿಕ ಸಾಮರ್ಥ್ಯವಾದ 35 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 3 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಸರ್ಕಾರಿ ಆದೇಶದಲ್ಲಿ ಶ್ರೀ ಬಿ.ಎಂ. ಫಾರುಖ್ ರವರಿಗೆ ಈ ಕೆಳಗಿನ ಷೆಡ್ಯೂಲ್ ನಲ್ಲಿ ವಿವರಿಸಿದಂತೆ ಹಾಗೂ ಕೆಲವೊಂದು ಷರತ್ತಿಗೊಳಪಟ್ಟು ವರ್ಗಾಯಿಸಿ ಆದೇಶಿಸಲಾಗಿತ್ತು.

| Village Name | Taluk/District | Capacity in MW | Land survey No. | No. of WTG's | Extent in Land (Acres) | Wind Turbine Generator Location No. |
|---|---|---|---|---|---|---|
| Basavanahatti | Basavanabagewadi/ Bijapur | 0.50 | 95/B4 | 2 | 4.35 | BM-6, 7 |
| Hancinal | | 1.25 | 87/A1 & A/4 | 5 | 6.24 | BM-1,2,3,4&5 |
| Karabhantanal | | 1.25 | 68/1&2 | 5 | 7.38 | BM-8.9.10,11&12 |
| | **TOTAL** | **3.0** | | **12** | **17.97** | |

ಯೋಜನೆಯ ಅನುಷ್ಠಾನಕ್ಕೆ ಆರ್ಥಿಕ ಸಂಸ್ಥೆಗಳಿಂದ ಹಣಕಾಸಿನ ನೆರವನ್ನು ಪಡೆಯಲು ತೊಂದರೆಯಾಗುತ್ತಿರುವುದರಿಂದ ದಿನಾಂಕ 10–06–2011 ರ ಸರ್ಕಾರಿ ಆದೇಶದಲ್ಲಿ ಶ್ರೀ ಬಿ.ಎಂ.ಫಾರೂಖ್ ರವರಿಗೆ ವರ್ಗಾವಣೆಗೊಂಡಿರುವ 3 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ರದ್ದುಪಡಿಸಿ ಮೂಲ ಕಂಪನಿಯಾದ ಮೆ:: ಫಾರ್ಚುನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ವರ್ಗಾಯಿಸುವಂತೆ ಎರಡೂ ಯೋಜನೆಗಳ ಅಭಿವೃದ್ಧಿದಾರರು ಕೋರಿರುವುದರಿಂದ ಅಭಿವೃದ್ಧಿದಾರರ ಕೋರಿಕೆಯನ್ನು ನಿಗದಿತ ವರ್ಗಾವಣೆ ಶುಲ್ಕ ಪಾವತಿಸುವ ಷರತ್ತಿಗೊಳಪಟ್ಟು ಪರಿಗಣಿಸಬಹುದಾಗಿದೆಯೆಂದು ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 104 ಎನ್‌ಸಿಇ 2013, ಬೆಂಗಳೂರು, ದಿನಾಂಕ: 01–07–2013**

ಮೆ:: ಫಾರ್ಚುನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ರವರಿಂದ ಸರ್ಕಾರಿ ಆದೇಶ ಸಂಖ್ಯೆ : ಇಎನ್ 254 ಎನ್‌ಸಿಇ 2011, ದಿನಾಂಕ 10.06.2011 ರಲ್ಲಿ ಶ್ರೀ ಬಿ.ಎಂ. ಫಾರುಖ್ ರವರಿಗೆ ವರ್ಗಾಯಿಸಿ 3 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ನಿಗದಿತ ವರ್ಗಾವಣೆ ಶುಲ್ಕ ಪಾವತಿಸುವ ಷರತ್ತಿಗೊಳಪಟ್ಟು ಮೂಲ ಹಂಚಿಕೆದಾರರಾದ ಮೆ:: ಫಾರ್ಚುನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ಮತ್ತೆ ವರ್ಗಾಯಿಸಿ ಆದೇಶಿಸಿದೆ.

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿನ ನಿಬಂಧನೆಗಳು ಯಥವತ್ತಾಗಿ ಮುಂದುವರೆಯುತ್ತವೆ.

ಈ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ.ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**PR.1134**

**SC.25**

## ಇಂಧನ ಸಚಿವಾಲಯ

**ವಿಷಯ:** ಮೆ : ಅಂತರಗಂಗೆ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರ ಗೊನಾಲ್ SHP-I (2x875 KW) ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಕಾಶ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 337 ಎನ್‌ಸಿಇ 2008 ದಿನಾಂಕ: 25.03.2008.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/SH-220/Gonal MHS/2013/827 ದಿನಾಂಕ: / /2013.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ:: ವೆನಿಕಾ ಹೈಡ್ರೊ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಶೋರಾಪುರ ತಾಲ್ಲೂಕಿನ ನಾಗರಾಳ ಗ್ರಾಮದ ಬಳಿ ಕೃಷ್ಣ ನದಿಯ ಉಪ ನದಿಯಾದ ದೇವಪುರ ನಾಲೆಗೆ ಅಡ್ಡಲಾಗಿ ಮಂಜೂರು ಮಾಡಿರುವ ಮೂರು ಹಂತಗಳಲ್ಲಿ ಅನುಷ್ಠಾನ ಮಾಡಲು ಅನುಮತಿಸಿರುವ ಗೊನಾಲ್ SHP-I (2x875 KW) ಸಾಮರ್ಥ್ಯದ ಯೋಜನೆಯನ್ನು ಮೆ: ಅಂತರಗಂಗೆ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ವರ್ಗಾಯಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರು ಮೆ: ಅಂತರಗಂಗೆ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಗುಲ್ಬರ್ಗಾ ಜಿಲ್ಲೆಯ ಶೋರಾಪುರ ತಾಲ್ಲೂಕಿನ ನಾಗರಾಳ ಗ್ರಾಮದ ಬಳಿ ಕೃಷ್ಣ ನದಿಯ ಉಪ ನದಿಯಾದ ದೇವಪುರ ನಾಲೆಗೆ ಅಡ್ಡಲಾಗಿ ಹಂಚಿಕೆ ಮಾಡಿ ಮೂರು ಹಂತಗಳಲ್ಲಿ ಅನುಷ್ಠಾನ ಮಾಡಲು ಅಡನುಮತಿಸಿರುವ ಯೋಜನೆಗಳಲ್ಲಿ ಗೊನಾಲ್ SHP-I (2x875 KW) ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಕಾಲಾವಕಾಶವು ದಿನಾಂಕ 10.12.2012ಕ್ಕೆ ಮುಕ್ತಾಯಗೊಂಡಿದ್ದು, ಅಭಿವೃದ್ಧಿದಾರರು ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಕಾರ್ಯನಿರತರಾಗಿದ್ದು, ಸಿವಿಲ್ ಕಾಮಗಾರಿಗಳನ್ನು ಪ್ರಾರಂಭಿಸಿರುವುದಾಗಿ ತಿಳಿಸಿ, ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶವನ್ನು ವಿಸ್ತರಿಸುವಂತೆ ಕೋರಿರುವುದರಿಂದ, ಯೋಜನಾ ಅನುಷ್ಠಾನಕ್ಕೆ ದಿನಾಂಕ 11.12.2012ರಿಂದ 10.12.2013ರವರೆಗೆ ಒಂದು ವರ್ಷ ಕಾಲಾವಕಾಶವನ್ನು ವಿಸ್ತರಿಸಬಹುದೆಂದು ಶಿಫಾರಸ್ಸಿಸಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಆದರೆ ಅಭಿವೃದ್ಧಿದಾರರು ದಿನಾಂಕ 11.12.2012ರಿಂದ ಎರಡು ವರ್ಷಗಳ ಅವಧಿಗೆ ಕಾಲಾವಧಿ ವಿಸ್ತರಿಸಲು ಕೋರಿ ₹ 7.50 ಲಕ್ಷಗಳ (ಎರಡು ವರ್ಷದ ಶುಲ್ಕ) ಶುಲ್ಕವನ್ನು ಈಗಾಗಲೇ ಕೆಆರ್‌ಇಡಿಎಲ್ ಸಂಸ್ಥೆಗೆ ಪಾವತಿಸಿರುವುದನ್ನು ಪರಿಗಣಿಸಿ, ಸದರಿ ಯೋಜನೆಯ ಅನುಷ್ಠಾನಕ್ಕೆ ದಿನಾಂಕ 11.12.2012 ರಿಂದ ಮುಂದಿನ ಎರಡು ವರ್ಷಗಳ ಅವಧಿಗೆ ಕಾಲಾವಧಿ ವಿಸ್ತರಿಸಲು ತೀರ್ಮಾನಿಸಿ. ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 83 ಎನ್‌ಸಿಇ 2013 (1),ಬೆಂಗಳೂರು, ದಿನಾಂಕ: 24.06.2013.**

ಮೆ: ಅಂತರಗಂಗೆ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಗುಲ್ಬರ್ಗಾ ಜಿಲ್ಲೆಯ ಶೋರಾಪುರ ತಾಲ್ಲೂಕಿನ ನಾಗರಾಳ ಗ್ರಾಮದ ಬಳಿ ಕೃಷ್ಣ ನದಿಯ ಉಪ ನದಿಯಾದ ದೇವಪುರ ನಾಲೆಗೆ ಅಡ್ಡಲಾಗಿ ಹಂಚಿಕೆ ಮಾಡಿ ಮೂರು ಹಂತಗಳಲ್ಲಿ ಅನುಷ್ಠಾನ ಮಾಡಲು ಅನುಮತಿಸಿರುವ ಗೊನಾಲ್ SHP-I (2x875 KW) ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ದಿನಾಂಕ 11.12.2012ರಿಂದ 10.12.2014 ರವರೆಗೆ ಕಾಲಾವಧಿ ವಿಸ್ತರಿಸಿ ಆದೇಶಿಸಿದೆ.

ಈ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ.ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**PR.1125**

**SC.25**

## ಇಂಧನ ಸಚಿವಾಲಯ

**ವಿಷಯ:** ಮೆ: ರಂಗಿನೇಣಿ ಸ್ಟೀಲ್ ಪ್ರೈವೇಟ್ ಲಿಮಿಟೆಡ್ (M/s Rangineni Steel Pvt Ltd) ರವರಿಗೆ ವರ್ಗಾವಣೆಗೊಂಡಿರುವ 1.25 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಡಿಇ 98 ಎನ್‌ಸಿಇ 2000 ದಿನಾಂಕ: 10.7.2000.

2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 172 ಎನ್‌ಸಿಇ 2011 ದಿನಾಂಕ: 17.7.2012.

3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 64 ಎನ್‌ಸಿಇ 2013 ದಿನಾಂಕ: 04.3.2013.

4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED /08/RSPL-1.25 MW(SEL-11.25MW)/ Bambargi/2013/1403 ದಿನಾಂಕ: 17.06.2013

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ : ಸುಜ್ಲಾನ್ ಎನರ್ಜಿ ಲಿಮಿಟೆಡ್ ರವರಿಗೆ ಈ ಕೆಳಕಂಡಂತೆ 98 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯು ಹಂಚಿಕೆಯಾಗಿತ್ತು.

| District | Location | MW |
|---|---|---|
| Belgaum | Chikkodi | 19 |
| | Hanumanahatti | 26 |
| Bellary | Sogi (South) | 9 |
| | Gujanur | 3 |
| Hassan | Haradanahalli | 23 |
| Chitradurga | Jogimatti-1 | 18 |
| | **TOTAL** | **98** |

ಈ ಸಾಮರ್ಥ್ಯದಲ್ಲಿ 53.00 ಮೆ.ವ್ಯಾ. ಸಾಮರ್ಥ್ಯವು ಈಗಾಗಲೇ ಅನುಷ್ಠಾನಗೊಂಡಿರುತ್ತದೆ ಹಾಗೂ ಸದರಿ ಆದೇಶದ ಕ್ರಮ ಸಂಖ್ಯೆ (1)ರಲ್ಲಿ ಬೆಳಗಾವಿ ಜಿಲ್ಲೆಯ ಹನುಮನಹಟ್ಟಿ ಪ್ರದೇಶದಲ್ಲಿ ಹಂಚಿಕೆಯಾಗಿದ್ದ 26.00 ಮೆ.ವ್ಯಾ ಪವನ ವಿದ್ಯುತ್ ಯೋಜನೆಯಲ್ಲಿ ಬಂಬರ್ಗಿ ಗ್ರಾಮದಲ್ಲಿ ಬರುವ 14.75 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸ್ಥಳವು ಬೆಳಗಾವಿ ವಿಮಾನ ನಿಲ್ದಾಣದ ಸಮೀಪದಲ್ಲಿ ಬರುವುದರಿಂದ ಅನುಷ್ಠಾನಗೊಳಿಸಲು ಸಾಧ್ಯವಾಗದ ಕಾರಣದಿಂದ ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರದ್ದುಪಡಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ : ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಯವರಿಗೆ ಬೆಳಗಾವಿ ಜಿಲ್ಲೆಯ ಹನುಮನಹಟ್ಟಿ ಪ್ರದೇಶದಲ್ಲಿ ಮಂಜೂರಾಗಿ ಬಾಕಿ ಉಳಿದಿರುವ 11.25 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ **1.25 ಮೆ.ವ್ಯಾ.** ಸಾಮರ್ಥ್ಯದ ಯೋಜನೆಯನ್ನು ಮೆ:: ರಂಗಿನೇಣಿ ಸ್ಟೀಲ್ ಪ್ರೈವೇಟ್ ಲಿಮಿಟೆಡ್ (M/s Rangineni Steel Pvt. Ltd.) ರವರಿಗೆ ಸದರಿ ಯೋಜನೆಯನ್ನು ದಿನಾಂಕ 31.3.2013ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದೆಂಬ ಷರತ್ತಿಗೊಳಪಟ್ಟು ವರ್ಗಾಯಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ (4)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ರಂಗಿನೇಣಿ ಸ್ಟೀಲ್ ಪ್ರೈವೇಟ್ ಲಿಮಿಟೆಡ್ (M/s Rangineni Steel Pvt Ltd) ರವರಿಗೆ ವರ್ಗಾವಣೆಗೊಂಡಿರುವ 1.25 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ದಿನಾಂಕ 31.3.2013ರೊಳಗೆ ಅನುಷ್ಠಾನಗೊಳಿಸಲು ಕಷ್ಟಸಾಧ್ಯವಾಗಿರುವುದರಿಂದ, ಕಾಲಾವಧಿ ವಿಸ್ತರಿಸುವಂತೆ ಅಭಿವೃದ್ಧಿದಾರರು ಕೋರಿರುವುದರಿಂದ, ಯೋಜನೆಯ ಪ್ರಗತಿಯನ್ನು ಗಣನೆಗೆ ತೆಗೆದುಕೊಂಡು, ಯೋಜನೆಯ ಅನುಷ್ಠಾನಕ್ಕೆ ನಿಗಧಿತ ಕಾಲಾವಕಾಶ ಶುಲ್ಕ ಪಾವತಿಸುವ ಷರತ್ತಿಗೊಳಪಟ್ಟು 6 ತಿಂಗಳ ಕಾಲಾವಧಿಯನ್ನು ವಿಸ್ತರಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 169 ಎನ್‌ಸಿಇ 2013, ಬೆಂಗಳೂರು, ದಿನಾಂಕ: 26.06.2013.**

ಮೆ:: ರಂಗಿನೇಣಿ ಸ್ಟೀಲ್ ಪ್ರೈವೇಟ್ ಲಿಮಿಟೆಡ್ (M/s Rangineni Steel Pvt. Ltd.) ಕಂಪನಿಯವರಿಗೆ ಸರ್ಕಾರದ ಆದೇಶ ಸಂಖ್ಯೆ ಇಎನ್ 64 ಎನ್‌ಸಿಇ 2013 ದಿನಾಂಕ 04.3.2013ರಲ್ಲಿ ಬೆಳಗಾವಿ ಜಿಲ್ಲೆಯ ಹನುಮನಹಟ್ಟಿ ಪ್ರದೇಶದಲ್ಲಿ ವರ್ಗಾವಣೆಗೊಂಡಿರುವ 1.25 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ನಿಗಧಿತ ಕಾಲಾವಕಾಶ ಶುಲ್ಕವನ್ನು ಕೆಆರ್‌ಇಡಿಎಲ್ ಸಂಸ್ಥೆಗೆ ಪಾವತಿಸುವ ಷರತ್ತಿಗೊಳಪಟ್ಟು ಕಾಲಾವಧಿಯನ್ನು ದಿನಾಂಕ 01.4.2013ರಿಂದ ಮುಂದಿನ 6 ತಿಂಗಳ ವರೆಗೆ ವಿಸ್ತರಿಸಿದೆ.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ.ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**PR.1129**

**SC.25**

## ಇಂಧನ ಸಚಿವಾಲಯ

**ವಿಷಯ:** ಮೆ: ಭರೂಕ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪನಿಯವರಿಗೆ ತತ್ವಶಃ ಅನುಮತಿ ನೀಡಿರುವ 23 ಮೆ.ವ್ಯಾ. ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 49.6 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಪತ್ರ ಸಂಖ್ಯೆ : ಇಎನ್ 69 ಎನ್‌ಸಿಇ 2012 ದಿನಾಂಕ : 25.9.2012.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: ಕೆಆರ್‌ಇಡಿ/08/BPCL(23 MW to 49.6 MW)/ 2012/2923 ದಿನಾಂಕ: 09.11.2012 ಹಾಗೂ ಕೆಆರ್‌ಇಡಿ/08/BPCL(23 MW to 49.6 MW)/2012/13 ದಿನಾಂಕ: 01.1.2013

3) ದಿನಾಂಕ 11.3.2013ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ ಕೆಆರ್‌ಇಡಿ/08/BPCL-23 to 49.6 MW/2013/1346 ದಿನಾಂಕ: 30.05/07.06.2013.

**ಪ್ರಸ್ತಾವನೆ:–**

ಮೇಲೆ ಓದಲಾದ (1) ರ ಪತ್ರದಲ್ಲಿ ಮೆ:: ಭರೂಕ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪನಿಗೆ ಬೆಳಗಾವಿ ಜಿಲ್ಲೆಯ ರಾಯಭಾಗ ತಾಲ್ಲೂಕಿನ ಬಸ್ತವಾಡ್, ಬಿರ್ನಾಲ್, ಬ್ಯಾಕುಡ್ ಮತ್ತು ಖಾಂಡಾಲ್ ಗ್ರಾಮಗಳಲ್ಲಿ 23 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಘಟಕ ಸ್ಥಾಪಿಸುವ ಬಗ್ಗೆ ವಿವರವಾದ ಯೋಜನಾ ವರದಿಯನ್ನು ಒಂದು ವರ್ಷದೊಳಗೆ ತಯಾರಿಸಿ ಕೆಆರ್‌ಇಡಿಎಲ್‌ಗೆ ಸಲ್ಲಿಸುವ ಷರತ್ತಿಗೊಳಪಟ್ಟು ತತ್ವಶಃ ಅನುಮತಿಯನ್ನು ನೀಡಲಾಗಿತ್ತು.

ಮೆ : ಭರೂಕ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪನಿಗೆ ಬೆಳಗಾವಿ ಜಿಲ್ಲೆಯ ರಾಯಭಾಗ ತಾಲ್ಲೂಕಿನ ಬಸ್ತವಾಡ್, ಬಿರ್ನಾಲ್, ಬ್ಯಾಕುಡ್ ಮತ್ತು ಖಾಂಡಾಲ್ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 23 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು 49.6 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸುವ ಕುರಿತಂತೆ ವಿಸ್ತೃತ ಯೋಜನಾ ವರದಿಯನ್ನು ತಯಾರಿಸಿ ಸಲ್ಲಿಸಿರುವುದಾಗಿ ತಿಳಿಸುತ್ತಾ, ಸದರಿ ಯೋಜನೆಗೆ ಅವಶ್ಯಕವಾದ ಭೂಮಿಯು ಖಾಸಗಿ ಜಮೀನಾಗಿರುವುದಾಗಿ, ಉತ್ಪಾದನೆ ಆಗುವ ವಿದ್ಯುತ್ತನ್ನು ಸಂಬಂಧಿಸಿದ ಎಸ್ಕಾಂನೊಂದಿಗೆ ವಿದ್ಯುತ್ ಖರೀದಿ ಒಪ್ಪಂದ ಮಾಡಿಕೊಳ್ಳುವ ಹಾಗೂ ಯೋಜನೆಯನ್ನು ಡಿಸೆಂಬರ್ 2014ರ ಅಂತ್ಯದ ಒಳಗೆ ಅನುಷ್ಠಾನಗೊಳಿಸುವ ಷರತ್ತಿಗೊಳಪಟ್ಟು ಸಾಮರ್ಥ್ಯವನ್ನು ಹೆಚ್ಚಿಸಬಹುದೆಂದು ಮೇಲೆ ಓದಲಾದ (2)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಶಿಫಾರಸ್ಸಿನೊಂದಿಗೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಮೇಲೆ ಓದಲಾದ (3)ರ ಹಂಚಿಕೆ ಸಮಿತಿ ಸಭೆಯ ಮುಂದೆ ಮಂಡಿಸಲಾಗಿತ್ತು. ಮೆ : ಭರೂಕ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪನಿಗೆ ಬೆಳಗಾವಿ ಜಿಲ್ಲೆಯ ರಾಯಭಾಗ ತಾಲ್ಲೂಕಿನ ಬಸ್ತವಾಡ್, ಬಿರ್ನಾಲ್, ಬ್ಯಾಕುಡ್ ಮತ್ತು ಖಾಂಡಾಲ್ ಗ್ರಾಮಗಳಲ್ಲಿ 23 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು 49.6 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸುವ ಪ್ರಸ್ತಾವನೆಯನ್ನು ಪರಿಶೀಲಿಸಿದ ಸಮಿತಿಯು ಸದರಿ ಕಂಪನಿಗೆ ಈಗಾಗಲೇ ಹಂಚಿಕೆಯಾಗಿರುವ ವಿವಿಧ ಸಾಮರ್ಥ್ಯದ ಯೋಜನೆಗಳಲ್ಲಿ ನಿರೀಕ್ಷಿತ ಪ್ರಗತಿಯನ್ನು ಸಾದಿಸದೇ ಇರುವ ಕಾರಣ, ಅನುಷ್ಠಾನದ ಪ್ರತಿ ಯೋಜನಾವಾರು ಸಂಪೂರ್ಣ ಮಾಹಿತಿಯನ್ನು ಹಾಗೂ ವರ್ಷಾವಾರು ಸಾಧನೆಯ ಸಮೀಕ್ಷೆಯ ವರದಿಯನ್ನು ಪಡೆದು ಮರು ಸಲ್ಲಿಸುವಂತೆ ಸೂಚಿಸಿತ್ತು.

ಮೇಲೆ ಓದಲಾದ (4)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರಿಗೆ ರಾಜ್ಯದಲ್ಲಿ ಇಲ್ಲಿಯವರೆಗೆ 265.85 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗಳನ್ನು ಹಂಚಿಕೆ ಮಾಡಲಾಗಿದ್ದು, ಇದರಲ್ಲಿ 32.70 ಮೆ.ವ್ಯಾ. ಸಾಮರ್ಥ್ಯವನ್ನು ಅನುಷ್ಠಾನಗೊಳಿಸಿರುವುದಾಗಿ ಹಾಗೂ ಒಟ್ಟು ಸಾಮರ್ಥ್ಯದಲ್ಲಿ ಅನುಷ್ಠಾನಗೊಳಿಸಲು ಯೋಗ್ಯವಲ್ಲದ 54.35 ಮೆ.ವ್ಯಾ. ಸಾಮರ್ಥ್ಯವನ್ನು ಸರ್ಕಾರಕ್ಕೆ ಅಧ್ಯರ್ಪಿಸಿರುವುದನ್ನು ತಿಳಿಸುತ್ತಾ, ಬಾಕಿ ಇರುವ 178.8 ಮೆ.ವ್ಯಾ. ಯೋಜನೆಯ ಅನುಷ್ಠಾನವು ಪ್ರಗತಿಯಲ್ಲಿರುವುದಾಗಿ ವರದಿ ಮಾಡುತ್ತಾ, ಪ್ರಸ್ತಾವಿತ 23.00 ಮೆ.ವ್ಯಾ. ಸಾಮರ್ಥ್ಯವನ್ನು 49.60 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸಬಹುದೆಂಬ ಶಿಫಾರಸ್ಸಿನೊಂದಿಗೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಮರು ಸಲ್ಲಿಸಿರುತ್ತಾರೆ.

ಮೆ : ಭರೂಕ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪನಿಯವರು ಈಗಾಗಲೇ ಹಂಚಿಕೆಯಾಗಿರುವ ಪವನ ವಿದ್ಯುತ್ ಯೋಜನೆಗಳಲ್ಲಿ ಪ್ರಗತಿಯನ್ನು ಸಾಧಿಸಿರುವುದರಿಂದ ತತ್ವಶಃ ಅನುಮೋದನೆ ನೀಡಲಾಗಿರುವ 23.00 ಮೆ.ವ್ಯಾ. ಸಾಮರ್ಥ್ಯವನ್ನು 49.60 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸುವ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 347 ಎನ್‌ಸಿಇ 2012, ಬೆಂಗಳೂರು, ದಿನಾಂಕ: 28.06.2013.**

ಸರ್ಕಾರದ ಪತ್ರ ಸಂಖ್ಯೆ : ಇಎನ್ 69 ಎನ್‌ಸಿಇ 2012 ದಿನಾಂಕ : 25.9.2012ರಲ್ಲಿ ಮೆ : ಭರೂಕ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪನಿಗೆ ಬೆಳಗಾವಿ ಜಿಲ್ಲೆಯ ರಾಯಭಾಗ ತಾಲ್ಲೂಕಿನ ಬಸ್ತವಾಡ್, ಬಿರ್ನಾಲ್, ಬ್ಯಾಕುಡ್ ಮತ್ತು ಖಾಂಡಾಲ್ ಗ್ರಾಮಗಳಲ್ಲಿ 23.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಘಟಕ ಸ್ಥಾಪಿಸಲು ಅನುಮತಿ ನೀಡಿರುವ ಸಾಮರ್ಥ್ಯವನ್ನು 49.60 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸಿ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು ಆದೇಶಿಸಲಾಗಿದೆ :–

**SHEDULE**

| Near by villages of the proposed area and District | Geographical area details of the project | Sanctioned capacity in MW | Enhancement proposed in MW | No. of WTGs & rating in KW | Total capacity including proposed enhancement in MW |
|---|---|---|---|---|---|
| Bastwad, Birnal, Byakud and Khandal villages in Raybag taluk, Belgaum District. | The proposed area having several open scrubs and nearby Mavinahunda and a power line is running near the project area and North branch canal is covered in this project. The identified area is having several peaks and is covered in the following Geographical co-ordinates:<br>**Latitude**: 16°25'0"- 16°27'30" N<br>**Longitude**: 74°50'0"- 76°55'0" E<br>**Ridge peaks:** 621, 612, 602, 628, 631, 643, 618 & 603m Amsl.<br>Topo Sheet No: 47 L/15 | 23 | 26.6 | 31 Nos. x 1600 KW | 49.6 |

1 ಈ ಯೋಜನೆಯನ್ನು ಸರ್ಕಾರಿ ಆದೇಶ ಸಂಖ್ಯೆ: ಇಎನ್ 354 ಎನ್‌ಸಿಇ 2008 ದಿನಾಂಕ: 19.01.2010 ಹಾಗೂ ತಿದ್ದುಪಡಿ ಆದೇಶ ಸಂಖ್ಯೆ: ಇಎನ್ 07 ಎನ್‌ಸಿಇ 2011 ದಿನಾಂಕ 17.8.2011ರಲ್ಲಿ ನಿಗದಿಪಡಿಸಿರುವ ಅವಧಿಯೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು.

2. ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.

3 ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಯನ್ನು ಒಂದು ವರ್ಷದಲ್ಲಿ ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ತ್ರಿಪ್ರತಿಗಳಲ್ಲಿ ಸಲ್ಲಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್‌ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.

4 ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಠಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| **ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ** | **5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ** | **ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ** |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.

6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ಕಂದಾಯ ಇಲಾಖೆಗಳ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು. ಅಭಿವೃದ್ಧಿದಾರರು ಈ ಯೋಜನೆಯನ್ನು ಖಾಸಗಿ ಜಮೀನಿನಲ್ಲಿ ಕೈಗೊಳ್ಳುತ್ತಿರುವುದರಿಂದ, ಖಾಸಗಿ ಜಮೀನಿನ ಮಾಲೀಕರಿಂದ ಒಪ್ಪಿಗೆ ಪತ್ರವನ್ನು ಪಡೆಯತಕ್ಕದ್ದು.

7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ನೀತಿ ನಿಯಮಾನುಸಾರ ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

8. ಸರ್ಕಾರಿ ಆದೇಶ ಸಂ:ಇಎನ್ 95 ಇಬಿಎಸ್ 2009 ದಿ:29.12.2009ರನ್ವಯ ವಿನಾಯಿತಿ ಸೌಲಭ್ಯಗಳು ಅನ್ವಯಿಸುವುದು.

9. ಯೋಜನೆಯನ್ನು ತ್ವರಿತವಾಗಿ ಅನುಷ್ಠಾನ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವುದು.

10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆಗೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.

11. ಸದರಿ ಆದೇಶವನ್ನು ರದ್ದುಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**PR.1130**
**SC.25**

## ಇಂಧನ ಸಚಿವಾಲಯ

**ವಿಷಯ:** ಮೆ: ವೈಶಾಲಿ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆಯಾಗಿರುವ 30 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ: ಗ್ರೀನ್‌ಕೋ ವಿಂಡ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ವರ್ಗಾಯಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 86 ಎನ್‌ಸಿಇ 2009 ದಿನಾಂಕ: 01.02.2010.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: ಕೆಆರ್‌ಇಡಿ/08/VEPL (30 MW)-Greenko/2012/970 ದಿನಾಂಕ: 26/28.03.2012 ಮತ್ತು ಕೆಆರ್‌ಇಡಿ/08/VEPL (30 MW)-Greenko/2013/1069 ದಿನಾಂಕ: 03.05.2013.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವಿವರಿಸಿರುವಂತೆ ಮೆ : ವೈಶಾಲಿ ಎನರ್ಜಿ ಪ್ರೈವೇಟ್ ಲಿಮಿಟೆಡ್ ರವರಿಗೆ ಬಿಜಾಪುರ ಜಿಲ್ಲೆಯ ಕಮತಗಿ, ಕಗ್ಗೋಡು, ಹಡಗಲಿ ಮತ್ತು ಶಿವಾಂಗಿ ಗ್ರಾಮಗಳಲ್ಲಿ 30.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೆ: ವೈಶಾಲಿ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ರವರಿಗೆ ಬಿಜಾಪುರ ಜಿಲ್ಲೆಯ ಕಮತಗಿ, ಕಗ್ಗೋಡು, ಹಡಗಲಿ ಮತ್ತು ಶಿವಾಂಗಿ ಗ್ರಾಮಗಳಲ್ಲಿ ಹಂಚಿಕೆಯಾಗಿದ್ದ 30.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ: ಗ್ರೀನ್‌ಕೋ ವಿಂಡ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಅಭಿವೃದ್ಧಿದಾರರ ಕೋರಿಕೆಯ ಮೇರೆಗೆ ನಿಗದಿತ ವರ್ಗಾವಣೆ ಶುಲ್ಕ ಪಾವತಿಸುವ ಷರತ್ತಿಗೊಳಪಟ್ಟು ವರ್ಗಾಯಿಸಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೇಲೆ ಓದಲಾದ (2)ರ ಪತ್ರಗಳಲ್ಲಿ ಪ್ರಸ್ತಾವನೆಯನ್ನು ಶಿಫಾರಸ್ಸಿಸಿ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 141 ಎನ್‌ಸಿಇ 2012, ಬೆಂಗಳೂರು, ದಿನಾಂಕ: 05.07.2013.**

ಮೆ : ವೈಶಾಲಿ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿ ರವರಿಗೆ ಬಿಜಾಪುರ ಜಿಲ್ಲೆಯ ಕಮತಗಿ, ಕಗ್ಗೋಡು, ಹಡಗಲಿ ಮತ್ತು ಶಿವಾಂಗಿ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 30.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ಮೆ: ಗ್ರೀನ್‌ಕೋ ವಿಂಡ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ವರ್ಗಾಯಿಸಿ ಆದೇಶಿಸಿದೆ.

1) ಮೆ: ಗ್ರೀನ್‌ಕೋ ವಿಂಡ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2) ಈ ಯೋಜನೆಯ ವರ್ಗಾವಣೆಗೆ ಸಂಬಂಧಿಸಿದಂತೆ ಅವಶ್ಯವಿರುವ ವರ್ಗಾವಣೆ ಶುಲ್ಕವನ್ನು ಕ್ರೆಡಲ್‌ಗೆ ಪಾವತಿಸತಕ್ಕದ್ದು

3) ಸರ್ಕಾರಿ ಆದೇಶ ಸಂ: ಇಎನ್ 86 ಎನ್‌ಸಿಇ 2009, ದಿನಾಂಕ 01–02–2010 ರಲ್ಲಿ ಮಂಜೂರಾಗಿರುವ ಈ ಯೋಜನೆಯನ್ನು ದಿನಾಂಕ 01–02–2010 ರಿಂದಲೇ ಜಾರಿಗೆ ಬರುವಂತೆ ಸರ್ಕಾರಿ ತಿದ್ದುಪಡಿ ಆದೇಶ ಸಂಖ್ಯೆ: ಇಎನ್ 07 ಎನ್‌ಸಿಇ 2011, ದಿನಾಂಕ 18–07–2011 ರಲ್ಲಿ ನಿಗದಿಪಡಿಸಿದ ಅವಧಿಯೊಳಗಾಗಿ ಯೋಜನೆಯನ್ನು ಅನುಷ್ಠಾನಗೊಳಿಸತಕ್ಕದ್ದು.

ಸದರಿ ಆದೇಶವನ್ನು ರದ್ದುಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

PR.1138
SC.25

## ಇಂಧನ ಸಚಿವಾಲಯ

**ವಿಷಯ:** ಮೆ:: ದೊಡ್ಡಣ್ಣನವರ್ ಬ್ರದರ್ಸ್ ರವರು ಅನುಷ್ಠಾನಗೊಳಿಸಿರುವ 1.5 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ: ಹೆಕ್ಸಾ ವಿಂಡ್ ಫಾರ್ಮ್ ಪ್ರೈವೇಟ್ ಲಿಮಿಟೆಡ್ (M/s. Hexa Wind Farm Pvt. Ltd.) ರವರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇನ್ 130 ಎನ್‌ಸಿಇ 2008 ದಿನಾಂಕ: 28.03.2008.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/08/HWF-1.5MW-DB/2013/1604 ದಿನಾಂಕ: 08.07.2013.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರಿ ಆದೇಶದಲ್ಲಿ ಮೆ:: ವಾಯು ಶಕ್ತಿ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಕೊಪ್ಪಳ ಜಿಲ್ಲೆಯ, ಕುಷ್ಟಗಿ ತಾಲ್ಲೂಕಿನ ಹನುಮಸಾಗರ ಗ್ರಾಮದಲ್ಲಿ ಮಂಜೂರಾಗಿದ್ದ 2.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ:: ದೊಡ್ಡಣ್ಣನವರ್ ಬ್ರದರ್ಸ್ ರವರಿಗೆ ವರ್ಗಾವಣೆ ಮಾಡಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ದೊಡ್ಡಣ್ಣನವರ್ ಬ್ರದರ್ಸ್ ಕಂಪನಿಯವರಿಗೆ ಕೊಪ್ಪಳ ಜಿಲ್ಲೆಯ, ಕುಷ್ಟಗಿ ತಾಲ್ಲೂಕಿನ ಹನುಮಸಾಗರ ಗ್ರಾಮದಲ್ಲಿ ಮಂಜೂರಾಗಿರುವ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯು ದಿನಾಂಕ 30.3.2009ರಲ್ಲಿ ಅನುಷ್ಠಾನಗೊಂಡಿರುವುದಾಗಿ ತಿಳಿಸುತ್ತಾ, ಸದರಿ 1.5 ಮೆ.ವ್ಯಾ. ಸಾಮರ್ಥ್ಯವನ್ನು ಮೆ : ದೊಡ್ಡಣನವರ್ ಬ್ರದರ್ಸ್ ರವರಿಂದ ಮೆ: ಹೆಕ್ಸಾ ವಿಂಡ್ ಫಾರ್ಮ್ ಪ್ರೈವೇಟ್ ಲಿಮಿಟೆಡ್ ರವರಿಗೆ ವರ್ಗಾಯಿಸಲು ಅಭಿವೃದ್ಧಿದಾರರು ಕೋರಿರುತ್ತಾರೆಂದು ಹಾಗೂ ಉತ್ಪಾದನೆಯಾಗುವ ವಿದ್ಯುತ್ತನ್ನು ಸರಬರಾಜು ಮಾಡಲು ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ವಿದ್ಯುತ್ ಖರೀದಿ ಒಪ್ಪಂದ ಮಾಡಿಕೊಳ್ಳುವುದಾಗಿ ತಿಳಿಸುತ್ತಾರೆಂದು ವರದಿ ಮಾಡುತ್ತಾ, ಸದರಿ ಸಾಮರ್ಥ್ಯವನ್ನು ವರ್ಗಾಯಿಸಬಹುದೆಂಬ ಶಿಫಾರಸ್ಸಿನೊಂದಿಗೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 200 ಎನ್‌ಸಿಇ 2013, ಬೆಂಗಳೂರು, ದಿನಾಂಕ: 29.07.2013.**

ಮೆ : ದೊಡ್ಡಣ್ಣನವರ್ ಬ್ರದರ್ಸ್ ಕಂಪನಿಯವರಿಗೆ ಕೊಪ್ಪಳ ಜಿಲ್ಲೆಯ, ಕುಷ್ಟಗಿ ತಾಲ್ಲೂಕಿನ ಹನುಮಸಾಗರ ಗ್ರಾಮದಲ್ಲಿ ಮಂಜೂರಾಗಿರುವ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ: ಹೆಕ್ಸಾ ವಿಂಡ್ ಫಾರ್ಮ್ ಪ್ರೈವೇಟ್ ಲಿಮಿಟೆಡ್ (M/s. Hexa Wind Farm Pvt. Ltd.) ಕಂಪನಿಯವರಿಗೆ ಈ ಕೆಳಕಂಡ ಷರತ್ತಿಗೊಳಪಟ್ಟು **ವರ್ಗಾಯಿಸಿ ಆದೇಶಿಸಲಾಗಿದೆ:–**

1 **ಮೆ: ಹೆಕ್ಸಾ ವಿಂಡ್ ಫಾರ್ಮ್ ಪ್ರೈವೇಟ್ ಲಿಮಿಟೆಡ್** ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2 **ಮೆ: ಹೆಕ್ಸಾ ವಿಂಡ್ ಫಾರ್ಮ್ ಪ್ರೈವೇಟ್ ಲಿಮಿಟೆಡ್** ರವರು ಉತ್ಪಾದಿಸುವ ವಿದ್ಯುತ್ತನ್ನು ಸರಬರಾಜು ಮಾಡಲು ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ವಿದ್ಯುತ್ ಖರೀದಿ ಒಪ್ಪಂದವನ್ನು ಮಾಡಿಕೊಳ್ಳತಕ್ಕದ್ದು.

3 ಸದರಿ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**PR.1148**
**SC.25**

## ಇಂಧನ ಸಚಿವಾಲಯ

**ವಿಷಯ:** ಮೆ: ಗಮೇಶ ವಿಂಡ್ ಟರ್ಬೈನ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ತತ್ವಶಃ ಅನುಮತಿ ನೀಡಿರುವ 30.6 (10.20+20.40) ಮೆ.ವ್ಯಾ. ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 110 (50+60) ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಪತ್ರ ಸಂಖ್ಯೆ : ಇಎನ್ 76 ಎನ್‌ಸಿಇ 2012 ದಿನಾಂಕ : 24.9.2012.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: ಕೆಆರ್‌ಇಡಿ/08/GWTPL-30.6 to 110 MW (50+60)/Raichur/2013/1603 ದಿನಾಂಕ: 08.7.2013.

**ಪ್ರಸ್ತಾವನೆ:–**

ಮೇಲೆ ಓದಲಾದ (1) ರ ಪತ್ರದಲ್ಲಿ ಮೆ:: ಗಮೇಶ ವಿಂಡ್ ಟರ್ಬೈನ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ರಾಯಚೂರು ಜಿಲ್ಲೆಯ ಮಾನ್ವಿ ತಾಲ್ಲೂಕಿನ ಮಲ್ಲಾಪುರ, ಪಲಕನ್‌ಮರಡಿ, ಮಧುರ್‌ಕಲ್, ಚಿಂಚರ್ಗಿ, ಬುದ್ದಿನ್ನೆ, ದೇವರಗುಡ್ಡ, ಹುಡಾ ಮತ್ತು ಹೀರಾ ಗ್ರಾಮಗಳಲ್ಲಿ 10.20 ಮೆ.ವ್ಯಾ ಸಾಮರ್ಥ್ಯ ಮತ್ತು ರಾಯಚೂರು ಜಿಲ್ಲೆಯ ಲಿಂಗಸಗೂರು ತಾಲ್ಲೂಕಿನ ಸಾಣಿಕಲ್ಲು, ಕೆನಿಕೆಲ್ಲೂರ್, ಸರ್ಜಾಪುರ್, ಗೋನ್‌ವಾರ್, ಚಿಕ್ಕಹೆಸರೂರ್, ಹೀರೆಹೆಸರೂರ್ ಮತ್ತು ಅಮರಾವತಿ ಗ್ರಾಮಗಳಲ್ಲಿ 20.40 ಮೆ.ವ್ಯಾ. ಒಟ್ಟು 30.60 (10.20 + 20.40) ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗಳ ಘಟಕ ಸ್ಥಾಪಿಸುವ ಬಗ್ಗೆ ವಿವರವಾದ ಯೋಜನಾ ವರದಿಯನ್ನು ಒಂದು ವರ್ಷದೊಳಗೆ ತಯಾರಿಸಿ ಕೆಆರ್‌ಇಡಿಎಲ್‌ಗೆ ಸಲ್ಲಿಸುವ ಷರತ್ತಿಗೊಳಪಟ್ಟು ದಿನಾಂಕ 05.05.2012ರ ಹಂಚಿಕೆ ಸಮಿತಿಯ ನಿರ್ಣಯದಂತೆ ತತ್ವಶಃ ಅನುಮತಿಯನ್ನು ನೀಡಲಾಗಿತ್ತು.

ಮೆ : ಗಮೇಶ ವಿಂಡ್ ಟರ್ಬೈನ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ರಾಯಚೂರು ಜಿಲ್ಲೆಯ ಮಾನ್ವಿ ತಾಲ್ಲೂಕಿನ ಮಲ್ಲಾಪುರ, ಪಲಕನ್‌ಮರಡಿ, ಮಧುರ್‌ಕಲ್, ಚಿಂಚರ್ಗಿ, ಬುದ್ದಿನ್ನೆ, ದೇವರಗುಡ್ಡ, ಹುಡಾ ಮತ್ತು ಹೀರಾ ಗ್ರಾಮಗಳಲ್ಲಿ ತತ್ವಶಃ ಅನುಮೋದನೆ ನೀಡಿರುವ 10.20 ಮೆ.ವ್ಯಾ ಸಾಮರ್ಥ್ಯವನ್ನು 50.00 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸುವ ಕುರಿತಂತೆ ಹಾಗೂ ರಾಯಚೂರು ಜಿಲ್ಲೆಯ ಲಿಂಗಸಗೂರು ತಾಲ್ಲೂಕಿನ ಸಾಣಿಕಲ್ಲು, ಕೆನಿಕೆಲ್ಲೂರ್, ಸರ್ಜಾಪುರ್, ಗೋನ್‌ವಾರ್, ಚಿಕ್ಕಹೆಸರೂರ್, ಹೀರೆಹೆಸರೂರ್ ಮತ್ತು ಅಮರಾವತಿ ಗ್ರಾಮಗಳಲ್ಲಿ ತತ್ವಶಃ ಅನುಮೋದನೆ ನೀಡಿರುವ 20.40 ಮೆ.ವ್ಯಾ. ಸಾಮರ್ಥ್ಯವನ್ನು 60.00 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸುವ ಕುರಿತಂತೆ ಕ್ರಮವಾಗಿ ವಿಸ್ತೃತ ಯೋಜನಾ ವರದಿಯನ್ನು ತಯಾರಿಸಿ ಸಲ್ಲಿಸಿರುವುದಾಗಿ ತಿಳಿಸುತ್ತಾ, ಸಾಮರ್ಥ್ಯ ಹೆಚ್ಚಳಕ್ಕೆ ಸಂಬಂಧಿಸಿದ ನಿಗದಿತ ಶುಲ್ಕ ಪಾವತಿಸಿಕೊಂಡಿರುವುದಾಗಿ, ಸದರಿ ಯೋಜನೆಗೆ ಅವಶ್ಯಕವಾದ ಭೂಮಿಯು ಖಾಸಗಿ ಜಮೀನಾಗಿರುವುದಾಗಿ, ಉತ್ಪಾದನೆ ಆಗುವ ವಿದ್ಯುತ್ತನ್ನು ಸಂಬಂಧಿಸಿದ ಎಸ್ಕಾಂನೊಂದಿಗೆ ವಿದ್ಯುತ್ ಖರೀದಿ ಒಪ್ಪಂದ ಮಾಡಿಕೊಳ್ಳುವ ಹಾಗೂ ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟ ಮಾಡುವ ಮತ್ತು ಯೋಜನೆಯನ್ನು ಡಿಸೆಂಬರ್ 2015–16ರ ಅವಧಿಯಲ್ಲಿ ಅನುಷ್ಠಾನಗೊಳಿಸುವ ಷರತ್ತಿಗೊಳಪಟ್ಟು ಸಾಮರ್ಥ್ಯವನ್ನು ಹೆಚ್ಚಿಸಬಹುದೆಂದು ಮೇಲೆ ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಶಿಫಾರಸ್ಸಿನೊಂದಿಗೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 194 ಎನ್‌ಸಿಇ 2013, ಬೆಂಗಳೂರು, ದಿನಾಂಕ: 30.07.2013.**

ಸರ್ಕಾರದ ಪತ್ರ ಸಂಖ್ಯೆ : ಇಎನ್ 76 ಎನ್‌ಸಿಇ 2012 ದಿನಾಂಕ : 24.9.2012ರಲ್ಲಿ ಮೆ : ಗಮೇಶ ವಿಂಡ್ ಟರ್ಬೈನ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ರಾಯಚೂರು ಜಿಲ್ಲೆಯ ಮಾನ್ವಿ ತಾಲ್ಲೂಕಿನ ಮಲ್ಲಾಪುರ, ಪಲಕನ್‌ಮರಡಿ, ಮಧುರ್‌ಕಲ್, ಚಿಂಚರ್ಗಿ, ಬುದ್ದಿನ್ನೆ, ದೇವರಗುಡ್ಡ, ಹುಡಾ ಮತ್ತು ಹೀರಾ ಗ್ರಾಮಗಳಲ್ಲಿ ತತ್ವಶಃ ಅನುಮೋದನೆ ನೀಡಿರುವ 10.20 ಮೆ.ವ್ಯಾ ಸಾಮರ್ಥ್ಯವನ್ನು 50.00 ಮೆ.ವ್ಯಾ. ಸಾಮರ್ಥ್ಯಕ್ಕೆ ಹಾಗೂ ರಾಯಚೂರು ಜಿಲ್ಲೆಯ ಲಿಂಗಸಗೂರು ತಾಲ್ಲೂಕಿನ ಸಾಣಿಕಲ್ಲು, ಕೆನಿಕೆಲ್ಲೂರ್, ಸರ್ಜಾಪುರ್, ಗೋನ್‌ವಾರ್, ಚಿಕ್ಕಹೆಸರೂರ್, ಹೀರೆಹೆಸರೂರ್ ಮತ್ತು ಅಮರಾವತಿ ಗ್ರಾಮಗಳಲ್ಲಿ ತತ್ವಶಃ ಅನುಮೋದನೆ ನೀಡಿರುವ 20.40 ಮೆ.ವ್ಯಾ. ಸಾಮರ್ಥ್ಯವನ್ನು 60.00 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸಿ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು ಆದೇಶಿಸಲಾಗಿದೆ :–

**SHEDULE**

| Sl No. | Topo sheet No. | Proposed capacity in MW | Near by villages of the proposed area and District | Geographical area description of the project |
|---|---|---|---|---|
| 1 | 56 D/16 | 50 MW<br>(25 Nos. x 2000 KW) | Mallapur, Palkanmaradi, Madurkal, Chinchargi, buddinne, Devargudda, Huda and Hira villages in Manvi Taluk, Raichur District | The proposed land is plain area and a road crossing the proposed area between Raichur and Lingasugur. It also consists of open srubs and abandoned Goldmine. Agricultural activities in some parts of the area. The identified area is having several peaks and is covered in the following Geographical co-ordinates:<br>**Latitude**: 16°10'0"- 16°15'0" N<br>**Longitude**: 76°45'0"- 76°50'0" E<br>**Peaks:** 558, 486, 489, 514, 496, 544, 568, 575, 590 & 572m Amsl. |
| 2 | 56 D/12 | 60 MW<br>(30 Nos. x 2000 KW) | Sanikallu, Kanikellur, Sarjapur, Gonwar, Chikhesrur, Herehesrur and Amaravathi villages in Lingsugur Taluk, Raichur District | The proposed land is plain area and a road crossing the proposed area between Lingasugur and Maski. It also crosses Telephone, Powerline and Telegraphic lines. Agriculture activities in some parts of area. The identified area is having several peaks and is covered in the following Geographical co-ordinates:<br>**Latitude**: 16°0'51"- 16°10'0" N<br>**Longitude**: 76°30'0"- 76°40'13.5" E<br>**Peaks:** 540, 524, 541, 546, 557, 555, 542, 523, 535, 533, 532, 544, 530 & 503m Amsl. |
| **TOTAL** | | **110 MW** | | |

1. ಈ ಯೋಜನೆಯನ್ನು ಸರ್ಕಾರಿ ಆದೇಶ ಸಂಖ್ಯೆ: ಇಎನ್ 354 ಎನ್‌ಸಿಇ 2008 ದಿನಾಂಕ: 19.01.2010 ಹಾಗೂ ತಿದ್ದುಪಡಿ ಆದೇಶ ಸಂಖ್ಯೆ: ಇಎನ್ 07 ಎನ್‌ಸಿಇ 2011 ದಿನಾಂಕ 17.8.2011ರಲ್ಲಿ ನಿಗದಿಪಡಿಸಿರುವ ಅವಧಿಯೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಯನ್ನು ಒಂದು ವರ್ಷದಲ್ಲಿ ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ತ್ರಿಪ್ರತಿಗಳಲ್ಲಿ ಸಲ್ಲಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್‌ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.

6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ಕಂದಾಯ ಇಲಾಖೆಗಳ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು. ಅಭಿವೃದ್ಧಿದಾರರು ಈ ಯೋಜನೆಯನ್ನು ಖಾಸಗಿ ಜಮೀನಿನಲ್ಲಿ ಕೈಗೊಳ್ಳುತ್ತಿರುವುದರಿಂದ, ಖಾಸಗಿ ಜಮೀನಿನ ಮಾಲೀಕರಿಂದ ಒಪ್ಪಿಗೆ ಪತ್ರವನ್ನು ಪಡೆಯತಕ್ಕದ್ದು.
7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ನೀತಿ ನಿಯಮಾನುಸಾರ ವಿದ್ಯುತ್ ಖರೀದಿ ಒಡಂಬಡಿಕೆ / ವೀಲಿಂಗ್ ಮತ್ತು ಬ್ಯಾಂಕಿಂಗನ್ನು 3ನೇ ವ್ಯಕ್ತಿಯೊಂದಿಗೆ ಮಾಡಿಕೊಳ್ಳತಕ್ಕದ್ದು.
8. ಸರ್ಕಾರಿ ಆದೇಶ ಸಂ:ಇಎನ್ 95 ಇಬಿಎಸ್ 2009 ದಿ:29.12.2009ರನ್ವಯ ವಿನಾಯಿತಿ ಸೌಲಭ್ಯಗಳು ಅನ್ವಯಿಸುವುದು.
9. ಯೋಜನೆಯನ್ನು ತ್ವರಿತವಾಗಿ ಅನುಷ್ಠಾನ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವುದು.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆಗೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.
11. ಸದರಿ ಆದೇಶವನ್ನು ರದ್ದುಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**PR.1149**
**SC.25**

## ಇಂಧನ ಸಚಿವಾಲಯ

**ವಿಷಯ:** ಜೆ.ಎನ್. ಇನ್ವೆಸ್ಟ್‌ಮೆಂಟ್ಸ್ ಆಂಡ್ ಟ್ರೇಡಿಂಗ್ ಕಂಪನಿ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಮಂಜೂರಾಗಿರುವ 77.6 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 7.2 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ: ಆರ್.ಎನ್.ಎಸ್. ಪವರ್ ಪ್ರೈವೇಟ್ ಲಿಮಿಟೆಡ್ ರವರಿಗೆ ವರ್ಗಾವಣೆ ಮಾಡುವ ಕುರಿತು.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಡಿಇ 41 ಎನ್‌ಸಿಇ 2006 ದಿನಾಂಕ: 20.04.2006.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 400 ಎನ್‌ಸಿಇ 2010(1) ದಿನಾಂಕ: 27.09.2010.
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 148 ಎನ್‌ಸಿಇ 2011 ದಿನಾಂಕ: 23.03.2011
4) ಸರ್ಕಾರಿ ಆದೇಶ ಸಂಖ್ಯೆ: ಇಎನ್ 148 ಎನ್‌ಸಿಇ 2011 ದಿನಾಂಕ: 04.7.2011.
5) ಸರ್ಕಾರಿ ಆದೇಶ ಸಂಖ್ಯೆ: ಇಎನ್ 333 ಎನ್‌ಸಿಇ 2012 ದಿನಾಂಕ: 12.02.2013.
6) ಸರ್ಕಾರಿ ಆದೇಶ ಸಂಖ್ಯೆ: ಇಎನ್ 333 ಎನ್‌ಸಿಇ 2012 ದಿನಾಂಕ: 01.06.2013.
7) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/RNSPL-7.2 MW (JNI-77.6 MW)/ 2013/1557 ದಿನಾಂಕ: 04.07.2013.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಜೆ.ಎನ್. ಇನ್ವೆಸ್ಟ್‌ಮೆಂಟ್ಸ್ ಆಂಡ್ ಟ್ರೇಡಿಂಗ್ ಕಂಪನಿ ಪ್ರೈವೇಟ್ ಲಿಮಿಟೆಡ್ ಕಂಪನಿ ರವರಿಗೆ ಧಾರವಾಡ ಮತ್ತು ಗದಗ ಜಿಲ್ಲೆಗಳ ವಿವಿಧ ಪ್ರದೇಶಗಳಲ್ಲಿ ಒಟ್ಟು 84.84. ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಲವೊಂದು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು. ಮೇಲಿನ ಒಟ್ಟು ಸಾಮರ್ಥ್ಯದಲ್ಲಿ ಗದಗ್ ಜಿಲ್ಲೆಯ ಅಡವಿಸೋಮಾಪುರ, ಕಳಸಪುರ, ಮಲ್ಲಸಮುದ್ರ ಗ್ರಾಮಗಳಲ್ಲಿ ಹಂಚಿಕೆಯಾಗಿದ್ದ ಭಾಗಶಃ ಸಾಮರ್ಥ್ಯವಾದ 6.93 ಮೆ.ವ್ಯಾ. ಸಾಮರ್ಥ್ಯವನ್ನು 8.00 ಮೆ.ವ್ಯಾ.ಗೆ ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹೆಚ್ಚಿಸಿ ಆದೇಶಿಸಲಾಗಿತ್ತು. ಸದರಿ ಸಾಮರ್ಥ್ಯವನ್ನು ಮೇಲೆ ಕ್ರಮ ಸಂಖ್ಯೆ (3) ಹಾಗೂ (4)ರಲ್ಲಿ ಓದಲಾಗಿರುವ ಆದೇಶಗಳಲ್ಲಿ ಕ್ರಮವಾಗಿ 15.2 ಮೆ.ವ್ಯಾ. ಸಾಮರ್ಥ್ಯಕ್ಕೆ ಹಾಗೂ 27.2 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸಿ ಆದೇಶಿಸಲಾಗಿತ್ತು. ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸದರಿ 27.2 ಮೆ.ವ್ಯಾ. ಸಾಮರ್ಥ್ಯವನ್ನು 77.6 ಮೆ.ವ್ಯಾ.ಗೆ ಹೆಚ್ಚಿಸಿ ಈ ಯೋಜನೆಯನ್ನು ದಿನಾಂಕ 31.3.2013ರೊಳಗೆ ಅನುಷ್ಠಾನಗೊಳಿಸತಕ್ಕದ್ದೆಂದು ಆದೇಶಿಸಲಾಗಿತ್ತು. ಈ ಯೋಜನೆಯಲ್ಲಿ ಅಭಿವೃದ್ಧಿದಾರರು 27.2 ಮೆ.ವ್ಯಾ. ಸಾಮರ್ಥ್ಯವನ್ನು ಅನುಷ್ಠಾನಗೊಳಿಸಿದ್ದು ಬಾಕಿ ಇದ್ದ 50.4 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ಅಂತಿಮವಾಗಿ ದಿನಾಂಕ 01.4.2013 ರಿಂದ ದಿನಾಂಕ 31.12.2013 ರವರೆಗೆ ಕಾಲಾವಧಿಯನ್ನು ಮೇಲೆ ಕ್ರಮ ಸಂಖ್ಯೆ (6) ರಲ್ಲಿ ಓದಲಾದ ಆದೇಶದಲ್ಲಿ ವಿಸ್ತರಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (7) ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಜೆ.ಎನ್. ಇನ್ವೆಸ್ಟ್‌ಮೆಂಟ್ಸ್ ಆಂಡ್ ಟ್ರೇಡಿಂಗ್ ಕಂಪನಿ ಪ್ರೈವೇಟ್ ಲಿಮಿಟೆಡ್ ರವರಿಗೆ ಮಂಜೂರಾಗಿರುವ 77.6 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ ಅನುಷ್ಠಾನಕ್ಕೆ ಬಾಕಿ ಇರುವ 50.4 ಮೆ.ವ್ಯಾ. ಸಾಮರ್ಥ್ಯದಲ್ಲಿ 7.2 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ: ಆರ್.ಎನ್.ಎಸ್. ಪವರ್ ಲಿಮಿಟೆಡ್ ರವರಿಗೆ ವರ್ಗಾಯಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ ಹಾಗೂ ಸದರಿ ಯೋಜನೆಗೆ ಅವಶ್ಯಕವಾದ ಭೂಮಿಯು ಖಾಸಗಿ ಜಮೀನಾಗಿದ್ದು, ಉತ್ಪಾದನೆ ಆಗುವ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟ ಮಾಡಲಾಗುವುದೆಂದು ಮತ್ತು ಯೋಜನೆಯನ್ನು ದಿನಾಂಕ 31.12.2013ರೊಳಗೆ ಅನುಷ್ಠಾನಗೊಳಿಸಲಿರುವುದಾಗಿ ವರದಿ ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 191 ಎನ್‌ಸಿಇ 2013, ಬೆಂಗಳೂರು, ದಿನಾಂಕ: 01.08.2013**

ಮೆ: ಜೆ.ಎನ್. ಇನ್ವೆಸ್ಟ್‌ಮೆಂಟ್ಸ್ ಆಂಡ್ ಟ್ರೇಡಿಂಗ್ ಕಂಪನಿ ಲಿಮಿಟೆಡ್ ಕಂಪನಿಯವರಿಗೆ ಗದಗ ಜಿಲ್ಲೆಯ ಅಡವಿಸೋಮಾಪುರ, ಕಳಸಪುರ, ಮಲ್ಲಸಮುದ್ರ ಗ್ರಾಮಗಳಲ್ಲಿ ಮಂಜೂರಾಗಿರುವ 77.6 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ ಅನುಷ್ಠಾನಕ್ಕೆ ಬಾಕಿ ಇರುವ 50.4 ಮೆ.ವ್ಯಾ. ಸಾಮರ್ಥ್ಯದಲ್ಲಿ **7.2 ಮೆ.ವ್ಯಾ.** ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ: ಆರ್.ಎನ್.ಎಸ್. ಪವರ್ ಲಿಮಿಟೆಡ್ ರವರಿಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು **ವರ್ಗಾಯಿಸಲಾಗಿದೆ:–**

**SHEDULE**

| Near by villages of the proposed area and District | Geographical Area Details of the Project | Sanctioned capacity in MW | Enhancement Proposed in MW | No. of WTGs & rating in KW | Total capacity including proposed enhancement in MW |
|---|---|---|---|---|---|
| Adavisomapura, Kalasapura, Malasamudra villages in Gadag District | The proposed area is located on the North-East of Betgeri and South of Gadag. This area is spread around Nagasamudra and Adavisomapura and has several peaks. It is held by the following Geographical co-oridinates :-<br>**Latitude**: 15°21’7”- 15°24’27” N<br>**Longitude**: 75°36’30”- 75°41’2” E<br>**Ridge peaks:** 673, 702, 747, 717, 709, 678.3m AMSL. | 27.2 MW | 50.4 MW | 63 Nos. x 800 Kw | 77.6 MW |

| Sl. No. | Village Name | Taluk/ District | MW | Land Survey number | WTG’s No. | Extent of Land per WTG (Acres) | Latitude, Longitude |
|---|---|---|---|---|---|---|---|
| 1 | Adavi Somapura | Gadag/ Gadag | 0.80 | 130 | 21 | 1.1 | Lat: 15°21’55.6” N<br>Long: 75°39’10.4’’ E |
| 2 | Adavi Somapura | Gadag/ Gadag | 0.80 | 137 | 22 | 1.1 | Lat: 15°22’9.7” N<br>Long: 75°39’18.5’’ E |
| 3 | Adavi Somapura | Gadag/ Gadag | 0.80 | 142 | 23 | 1.1 | Lat: 15°22’25.2” N<br>Long: 75°39’58.8’’ E |
| 4 | Adavi Somapura | Gadag/ Gadag | 0.80 | 148 | 24 | 1.1 | Lat: 15°22’30.3” N<br>Long: 75°39’15.8’’ E |
| 5 | Adavi Somapura | Gadag/ Gadag | 0.80 | 150 | 25 | 1.1 | Lat: 15°22’38.3” N<br>Long: 75°39’2.3’’ E |
| 6 | Adavi Somapura | Gadag/ Gadag | 0.80 | 152 | 26 | 1.1 | Lat: 15°22’45” N<br>Long: 75°39’3.7’’ E |
| 7 | Adavi Somapura | Gadag/ Gadag | 0.80 | 155 | 27 | 1.1 | Lat: 15°22’54.9” N<br>Long: 75°39’19.4’’ E |
| 8 | Kalasapura | Gadag/ Gadag | 0.80 | 26 | 28 | 1.1 | Lat: 15°23’16.3” N<br>Long: 75°39’44.20’’ E |
| 9 | Kalasapura | Gadag/ Gadag | 0.80 | 25 | 29 | 1.1 | Lat: 15°23’22.3” N<br>Long: 75°39’40.8’’ E |
| **TOTAL** | | | **7.20** | | | | |

1 **ಮೆ: ಆರ್.ಎನ್.ಎಸ್. ಪವರ್ ಲಿಮಿಟೆಡ್** ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2 **ಮೆ: ಆರ್.ಎನ್.ಎಸ್. ಪವರ್ ಲಿಮಿಟೆಡ್** ರವರು ಉತ್ಪಾದಿಸುವ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟಮಾಡಲು ಅನುಮತಿಸಿದೆ.

3 **ಮೆ: ಆರ್.ಎನ್.ಎಸ್. ಪವರ್ ಲಿಮಿಟೆಡ್** ರವರು ಯೋಜನೆಯನ್ನು ದಿನಾಂಕ 31.12.2013ರೊಳಗೆ ಅನುಷ್ಠಾನಗೊಳಿಸತಕ್ಕದ್ದು.

4 ಸದರಿ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**PR.1150**
**SC.25**

## ಇಂಧನ ಸಚಿವಾಲಯ

**ವಿಷಯ:** ಮೆ:: ಮಾಸ್ಟರ್ ಪವರ್ A Division of Master Marine Services Pvt. Ltd. ಕಂಪನಿಯವರಿಗೆ ಹಂಚಿಕೆಯಾಗಿರುವ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 201 ಎನ್‌ಸಿಇ 2012 ದಿನಾಂಕ: 11.7.2012.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿಎಲ್/06/SH-824/ಕರಿಗಾಲ ಕಿಜವಿಯೊ/ 2013/382 ದಿನಾಂಕ: 12/13.02.2013.

3) ಸರ್ಕಾರದ ಕಾರಣ ಕೇಳುವ ನೋಟಿಸ್ ದಿನಾಂಕ : 20.03.2013.

**ಪ್ರಸ್ತಾವನೆ :–**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಮೆ:: ಮಾಸ್ಟರ್ ಪವರ್ A Division of Master Marine Services Pvt. Ltd. ಕಂಪನಿಗೆ ಮೈಸೂರು ಜಿಲ್ಲೆಯ ಹೆಚ್.ಡಿ.ಕೋಟೆ ತಾಲ್ಲೂಕಿನ ಬಚ್ಚೇಗೌಡನಹಳ್ಳಿ ಗ್ರಾಮದಲ್ಲಿ ಹರಿಯುವ ನದಿಗೆ ಅಡ್ಡಲಾಗಿ 1.00 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ (2)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರು ಮೆ : ಮಾಸ್ಟರ್ ಪವರ್ A Division of Master Marine Services Pvt. Ltd. ಕಂಪನಿಗೆ ಮೈಸೂರು ಜಿಲ್ಲೆಯ ಹೆಚ್.ಡಿ.ಕೋಟೆ ತಾಲ್ಲೂಕಿನ ಬಚ್ಚೇಗೌಡನಹಳ್ಳಿ ಗ್ರಾಮದಲ್ಲಿ ಹರಿಯುವ ನದಿಗೆ ಅಡ್ಡಲಾಗಿ 1.00 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯು ಹಂಚಿಕೆಯಾಗಿದ್ದು, ಅಭಿವೃದ್ಧಿದಾರರು ವಿವರವಾದ ಅಧ್ಯಯನದ ನಂತರ ಯೋಜನೆಗೆ PFR ತಿಳಿಸಿರುವುದಕ್ಕಿಂತ Head Level ಕಡಿಮೆ ಇರುವ ಕಾರಣ ಸಾಮರ್ಥ್ಯವು 1.00 ಮೆ.ವ್ಯಾ.ನಿಂದ 0.5 ಮೆ.ವ್ಯಾ. ಉತ್ಪಾದಿಸಬಹುದಾಗಿರುತ್ತದೆ ಹಾಗು ವಿದ್ಯುತ್ ಉತ್ಪಾದನೆಯು 3.91 ಮಿ.ಯು. ನಿಂದ 1.97 ಮಿ.ಯು.ಗಳಿಗೆ ಕಡಿಮೆಯಾಗುವುದೆಂದು ತಿಳಿಸಿದ್ದು, ಈ ಕಾರಣದಿಂದಾಗಿ ಯೋಜನೆಯನ್ನು ಕಾರ್ಯಗತಗೊಳಿಸಲು ಸಾಧ್ಯವಾಗದಿರುವುದರಿಂದ ಯೋಜನೆಯನ್ನು ರದ್ದುಗೊಳಿಸಬಹುದೆಂದು ಅಭಿವೃದ್ಧಿದಾರರ ಕೋರಿಕೆಯ ಮೇರೆಗೆ ಶಿಫಾರಸ್ಸುಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಆದೇಶದಲ್ಲಿ ಕಾರಣ ಕೇಳುವ ನೋಟಿಸನ್ನು ಅಭಿವೃದ್ಧಿದಾರರಿಗೆ ಜಾರಿಮಾಡಿ, ಸದರಿ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆಯನ್ನು ಯಾವುದೇ ಪ್ರಗತಿಯನ್ನು ಸಾಧಿಸದಿರುವುದರಿಂದ ಏಕೆ ರದ್ದು ಪಡಿಸಬಾರದು ಎಂಬುದಕ್ಕೆ ಸಮಜಾಯಿಷಿ ನೀಡುವಂತೆ ಕೋರಿ ರಿಜಿಸ್ಟರ್ಡ್ ಪೋಸ್ಟ್ ಮೂಲಕ ಕಳುಹಿಸಲಾಗಿತ್ತು. ಇದಕ್ಕೆ ಅಭಿವೃದ್ಧಿದಾರರು ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ 27.03.2013ರ ಪತ್ರದಲ್ಲಿ ಯೋಜನೆಯು ಅನುಷ್ಠಾನಕ್ಕೆ ಆರ್ಥಿಕವಾಗಿ ಕಾರ್ಯಸಾಧುವಲ್ಲವೆಂದು ತಿಳಿಸುತ್ತಾ, ಯೋಜನೆಯನ್ನು ರದ್ದು ಪಡಿಸುವಂತೆ ಕೋರಿರುತ್ತಾರೆ.

ಆದ್ದರಿಂದ, ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 71 ಎನ್‌ಸಿಇ 2012, ಬೆಂಗಳೂರು, ದಿನಾಂಕ: 02.8.2013.**

ಮೆ : ಮಾಸ್ಟರ್ ಪವರ್ A Division of Master Marine Services Pvt. Ltd. ಕಂಪನಿಗೆ ಸರ್ಕಾರಿ ಆದೇಶ ಸಂಖ್ಯೆ : ಇಎನ್ 201 ಎನ್‌ಸಿಇ 2012 ದಿನಾಂಕ 11.7.2012ರಲ್ಲಿ ಮೈಸೂರು ಜಿಲ್ಲೆಯ ಹೆಚ್.ಡಿ.ಕೋಟೆ ತಾಲ್ಲೂಕಿನ ಬಚ್ಚೇಗೌಡನಹಳ್ಳಿ ಗ್ರಾಮದಲ್ಲಿ ಹರಿಯುವ ನದಿಗೆ ಅಡ್ಡಲಾಗಿ ಹಂಚಿಕೆಯಾಗಿರುವ 1.00 ಮೆ.ವ್ಯಾ. ಸಾಮರ್ಥ್ಯದ ಕರಿಗಾಲ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಹಾಗೂ ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**PR.1151**
**SC.50**

## ಇಂಧನ ಸಚಿವಾಲಯ

**ವಿಷಯ:** ಮೆ:: ಮಾಸ್ಟರ್ ಪವರ್ A Division of Master Marine Services Pvt. Ltd. ಕಂಪನಿಯವರಿಗೆ ಹಂಚಿಕೆಯಾಗಿರುವ 1.75 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 202 ಎನ್‌ಸಿಇ 2012 ದಿನಾಂಕ: 11.7.2012.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/SH-825/ಕರಿಮುದ್ದನಹಳ್ಳಿ–ಕಿಜವಿಯೊ/ 2013/381 ದಿನಾಂಕ: 12/13.02.2013.

3) ಸರ್ಕಾರದ ಕಾರಣ ಕೇಳುವ ನೋಟಿಸ್ ದಿನಾಂಕ : 20.03.2013.

**ಪ್ರಸ್ತಾವನೆ :–**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಮೆ:: ಮಾಸ್ಟರ್ ಪವರ್ A Division of Master Marine Services Pvt. Ltd. ಕಂಪನಿಗೆ ಮೈಸೂರು ಜಿಲ್ಲೆಯ ಹುಣಸೂರು ತಾಲ್ಲೂಕಿನ ಕರಿಮುದ್ದನಹಳ್ಳಿಕೆರೆಗೆ ಅಡ್ಡಲಾಗಿ 1.75 ಮೆ.ವ್ಯಾ. ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ (2)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರು ಮೆ : ಮಾಸ್ಟರ್ ಪವರ್ A Division of Master Marine Services Pvt. Ltd. ಕಂಪನಿಗೆ ಮೈಸೂರು ಜಿಲ್ಲೆಯ ಮೈಸೂರು ಜಿಲ್ಲೆಯ ಹುಣಸೂರು ತಾಲ್ಲೂಕಿನ ಕರಿಮುದ್ದನಹಳ್ಳಿಕೆರೆಗೆ ಅಡ್ಡಲಾಗಿ 1.75 ಮೆ.ವ್ಯಾ. ಕಿರು ಜಲ ವಿದ್ಯುತ್ ಯೋಜನೆಯು ಹಂಚಿಕೆಯಾಗಿದ್ದು, ಅಭಿವೃದ್ಧಿದಾರರು ವಿವರವಾದ ಅಧ್ಯಯನದ ನಂತರ ಯೋಜನೆಗೆ PFR ತಿಳಿಸಿರುವುದಕ್ಕಿಂತ Head Level ಕಡಿಮೆ ಇರುವ ಕಾರಣ ಸಾಮರ್ಥ್ಯವು 1.75 ಮೆ.ವ್ಯಾ.ನಿಂದ 1.20 ಮೆ.ವ್ಯಾ. ಉತ್ಪಾದಿಸಬಹುದಾಗಿರುತ್ತದೆ ಹಾಗು ವಿದ್ಯುತ್ ಉತ್ಪಾದನೆಯು 6.35 ಮಿ.ಯು. ನಿಂದ 2.5 ಮಿ.ಯು.ಗಳಿಗೆ ಕಡಿಮೆಯಾಗುವುದೆಂದು ತಿಳಿಸಿದ್ದು, ಈ ಕಾರಣದಿಂದಾಗಿ ಯೋಜನೆಯನ್ನು ಕಾರ್ಯಗತಗೊಳಿಸಲು ಸಾಧ್ಯವಾಗದಿರುವುದರಿಂದ ಯೋಜನೆಯನ್ನು ರದ್ದುಗೊಳಿಸಬಹುದೆಂದು ಅಭಿವೃದ್ಧಿದಾರರ ಕೋರಿಕೆಯ ಮೇರೆಗೆ ಶಿಫಾರಸ್ಸುಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಆದೇಶದಲ್ಲಿ ಕಾರಣ ಕೇಳುವ ನೋಟಿಸನ್ನು ಅಭಿವೃದ್ಧಿದಾರರಿಗೆ ಜಾರಿಮಾಡಿ, ಸದರಿ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆಯನ್ನು ಯಾವುದೇ ಪ್ರಗತಿಯನ್ನು ಸಾಧಿಸದಿರುವುದರಿಂದ ಏಕೆ ರದ್ದು ಪಡಿಸಬಾರದು ಎಂಬುದಕ್ಕೆ ಸಮಜಾಯಿಷಿ ನೀಡುವಂತೆ ಕೋರಿ ರಿಜಿಸ್ಟರ್ಡ್ ಪೋಸ್ಟ್ ಮೂಲಕ ಕಳುಹಿಸಲಾಗಿತ್ತು. ಇದಕ್ಕೆ ಅಭಿವೃದ್ಧಿದಾರರು ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ 27.03.2013ರ ಪತ್ರದಲ್ಲಿ ಯೋಜನೆಯು ಅನುಷ್ಠಾನಕ್ಕೆ ಆರ್ಥಿಕವಾಗಿ ಕಾರ್ಯಸಾಧುವಲ್ಲವೆಂದು ತಿಳಿಸುತ್ತಾ, ಯೋಜನೆಯನ್ನು ರದ್ದು ಪಡಿಸುವಂತೆ ಕೋರಿರುತ್ತಾರೆ.

ಆದ್ದರಿಂದ, ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 72 ಎನ್‌ಸಿಇ 2012, ಬೆಂಗಳೂರು, ದಿನಾಂಕ: 02.8.2013.**

ಮೆ : ಮಾಸ್ಟರ್ ಪವರ್ A Division of Master Marine Services Pvt. Ltd. ಕಂಪನಿಗೆ ಸರ್ಕಾರಿ ಆದೇಶ ಸಂಖ್ಯೆ : ಇಎನ್ 202 ಎನ್‌ಸಿಇ 2012 ದಿನಾಂಕ 11.7.2012ರಲ್ಲಿ ಮೈಸೂರು ಜಿಲ್ಲೆಯ ಹುಣಸೂರು ತಾಲ್ಲೂಕಿನ ಕರಿಮುದ್ದನಹಳ್ಳಿಕೆರೆಗೆ ಅಡ್ಡಲಾಗಿ ಹಂಚಿಕೆಯಾಗಿರುವ 1.75 ಮೆ.ವ್ಯಾ. ಸಾಮರ್ಥ್ಯದ ಕರಿಮುದ್ದನಹಳ್ಳಿಕೆರೆ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಹಾಗೂ ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**PR.1152**
**SC.50**

## ಇಂಧನ ಸಚಿವಾಲಯ

**ವಿಷಯ:** ಮೆ:: ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಯವರಿಗೆ ಹಂಚಿಕೆಯಾಗಿರುವ 31.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 98 ಎನ್‌ಸಿಇ 2000 ದಿನಾಂಕ: 10.7.2000.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 484 ಎನ್‌ಸಿಇ 2010 ದಿನಾಂಕ: 28.12.2010.
3) ಸರ್ಕಾರದ ಕಾರಣ ಕೇಳುವ ನೋಟಿಸ್ ದಿನಾಂಕ : 13.04.2012.
4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ SEL-31.5/2012/1397ದಿನಾಂಕ: 17.06.2013.

**ಪ್ರಸ್ತಾವನೆ :–**

ಮೇಲೆ ಓದಲಾದ (1)ರ ಆದೇಶದಲ್ಲಿ ಮೆ:: ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಗೆ ಬೆಳಗಾವಿ, ಬಳ್ಳಾರಿ, ಹಾಸನ ಮತ್ತು ಚಿತ್ರದುರ್ಗ ಜಿಲ್ಲೆಯ ವಿವಿಧ ಸ್ಥಳಗಳಲ್ಲಿ 98 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ (2)ರ ಆದೇಶದಲ್ಲಿ ಮೆ:: ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಗೆ ಮೇಲಿನ ದಿನಾಂಕ 10.7.200ರ ಆದೇಶದಲ್ಲಿ ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ಗ್ರಾಮದಲ್ಲಿ ಹಂಚಿಕೆಯಾಗಿದ್ದ 19 ಮೆಗಾ ವ್ಯಾಟ್ (98 ಮೆ.ವ್ಯಾ.ದ ಅಂಶಿಕ ಸಾಮರ್ಥ್ಯ) ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು 31.5 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸಿ ಹಾಗೆಯೇ ಯೋಜನಾ ಅನುಷ್ಠಾನಕ್ಕೆ ಕಾಲಾವಕಾಶವನ್ನು ದಿನಾಂಕ 25.6.2011ರವರೆಗೆ ವಿಸ್ತರಿಸಿ ಆದೇಶಿಸಲಾಗಿತ್ತು. ಅದರಂತೆ, ನಿಗದಿತ ಅವಧಿಯೊಳಗಾಗಿ ಅಭಿವೃದ್ಧಿದಾರರು ಯೋಜನೆಯನ್ನು ಅನುಷ್ಠಾನಗೊಳಿಸಿರುವುದಿಲ್ಲ.

ಈ ಹಿನ್ನೆಲೆಯಲ್ಲಿ, ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಕಾರಣ ಕೇಳುವ ನೋಟಿಸನ್ನು ಅಭಿವೃದ್ಧಿದಾರರಿಗೆ ಜಾರಿಮಾಡಿ, ಸದರಿ ಪವನ ವಿದ್ಯುತ್ ಯೋಜನೆಯ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದು ಎಂಬುದಕ್ಕೆ ಸಮಜಾಯಿಷಿ ನೀಡುವಂತೆ ಕೋರಿ ನೊಂದಾಯಿತ ಅಂಚೆ ಮೂಲಕ ಕಳುಹಿಸಲಾಗಿತ್ತು. ಇದಕ್ಕೆ ಅಭಿವೃದ್ಧಿದಾರರು ಖಾಸಗಿ ಜಮೀನನ್ನು ಸ್ವಾಧೀನಪಡಿಸಿಕೊಳ್ಳುವ ನಿಟ್ಟಿನಲ್ಲಿ ಕ್ರಮ ಜರುಗಿಸುತ್ತಿರುವುದಾಗಿ ಮತ್ತು ಪವರ್ ಇವಾಕ್ಯೂಷನ್ ಪಡೆಯುವ ಪ್ರಕ್ರಿಯೆ ಜಾರಿಯಲ್ಲಿರುವುದಾಗಿ ತಿಳಿಸಿರುತ್ತಾರೆ. ಈ ಬಗ್ಗೆ ಕೆ.ಆರ್.ಇ.ಡಿ.ಎಲ್.ನ ವ್ಯವಸ್ಥಾಪಕ ನಿರ್ದೇಶಕರ ಅಭಿಪ್ರಾಯವನ್ನು ಕೋರಲಾಗಿತ್ತು. ಮೇಲೆ ಓದಲಾದ (4)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರು ಮೆ : ಸುಜ್ಲಾನ್ ಎನರ್ಜಿ ಲಿಮಿಟೆಡ್ ರವರಿಗೆ ಯೋಜನೆಯನ್ನು 2000 ನೇ ಇಸವಿಯಲ್ಲಿ ಹಂಚಿಕೆ ಮಾಡಿದ್ದು, ಯೋಜನಾ ಅನುಷ್ಠಾನದ ನಿಟ್ಟಿನಲ್ಲಿ

ಯಾವುದೇ ಪ್ರಗತಿ ಸಾಧಿಸದಿರುವುದರಿಂದ ಹಾಗೂ ಯೋಜನೆಯು ಇನ್ನೂ ವಿಳಂಬ ಹಂತದಲ್ಲಿರುವುದರಿಂದ ಮತ್ತು ಅಭಿವೃದ್ಧಿದಾರರು ನೀಡಿರುವ ಉತ್ತರವು ಸಮಂಜಸವಲ್ಲವೆಂದು ತಿಳಿಸುತ್ತಾ, ಸದರಿ ಕಂಪನಿಗೆ ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ಗ್ರಾಮದ ಬಳಿ ಮಂಜೂರಾಗಿರುವ 31.5 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ರದ್ದುಗೊಳಿಸಬಹುದೆಂದು ಶಿಫಾರಸ್ಸಿಸಿರುತ್ತಾರೆ.

ಆದ್ದರಿಂದ, ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 52 ಎನ್‌ಸಿಇ 2012, ಬೆಂಗಳೂರು, ದಿನಾಂಕ: 13.8.2013.**

ಮೆ : ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಗೆ ಬೆಳಗಾವಿ, ಬಳ್ಳಾರಿ, ಹಾಸನ ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಹಂಚಿಕೆಯಾಗಿದ್ದ ಒಟ್ಟು 98 ಮೆಗಾ ವ್ಯಾಟ್ ಪವನ ವಿದ್ಯುತ್ ಸಾಮರ್ಥ್ಯದಲ್ಲಿ ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ಗ್ರಾಮದಲ್ಲಿ ಮಂಜೂರಾಗಿದ್ದ 31.5 ಮೆಗಾ ವ್ಯಾಟ್ ಅಂಶಿಕ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಹಾಗೂ ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ.ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**PR.1162**

**SC.50**

## ಇಂಧನ ಸಚಿವಾಲಯ

**ವಿಷಯ:** ಮೆ:: ಕೇಪ್ ಇನ್‌ಫ್ರಾಸ್ಟ್ರಕ್ಚರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಹಂಚಿಕೆಯಾಗಿರುವ 33.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 231 ಎನ್‌ಸಿಇ 2005 ದಿನಾಂಕ: 19.8.2005.

2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 289 ಎನ್‌ಸಿಇ 2005 ದಿನಾಂಕ: 14.10.2005.

3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/CIPL-33.5/2011/67 ದಿನಾಂಕ: 07/09.01.2012.

4) ಸರ್ಕಾರದ ಕಾರಣ ಕೇಳುವ ನೋಟಿಸ್ ದಿನಾಂಕ : 25.04.2012.\

5) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/CAPE-33.5MW/2012/505 ದಿನಾಂಕ: 02.03.2013.

**ಪ್ರಸ್ತಾವನೆ :–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಮೆ:: ಕೇಪ್ ಇನ್‌ಫ್ರಾಸ್ಟ್ರಕ್ಚರ್ ಕಂಪನಿಗೆ ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಯ ವಿವಿಧ ಸ್ಥಳಗಳಲ್ಲಿ 18.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಮೆ:: ಕೇಪ್ ಇನ್‌ಫ್ರಾಸ್ಟ್ರಕ್ಚರ್ ಕಂಪನಿಗೆ ಚಿಕ್ಕಮಗಳೂರು ಮತ್ತು ಹಾಸನ ಜಿಲ್ಲೆಯ ವಿವಿಧ ಸ್ಥಳಗಳಲ್ಲಿ 15.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ:: ಕೇಪ್ ಇನ್‌ಫ್ರಾಸ್ಟ್ರಕ್ಚರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 2005–06ನೇ ಸಾಲಿನಲ್ಲಿ ಹಂಚಿಕೆಯಾಗಿರುವ ಸಾಮರ್ಥ್ಯದಲ್ಲಿ 33.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗಳ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ಕಾಣದೇ ಇರುವ ಕಾರಣ ಸದರಿ ಯೋಜನೆಗಳನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ, ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಕಾರಣ ಕೇಳುವ ನೋಟಿಸನ್ನು ಅಭಿವೃದ್ಧಿದಾರರಿಗೆ ಜಾರಿಮಾಡಿ, ಸದರಿ ಪವನ ವಿದ್ಯುತ್ ಯೋಜನೆಯ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದು ಎಂಬುದಕ್ಕೆ ಸಮಜಾಯಿಷಿ ನೀಡುವಂತೆ ಕೋರಲಾಗಿತ್ತು. ಅಭಿವೃದ್ಧಿದಾರರು ದಿನಾಂಕ 09.6.2012ರ ಪತ್ರದಲ್ಲಿ ಸದರಿ ಕಾರಣ ಕೇಳುವ ನೋಟಿಸ್ಗೆ ಉತ್ತರ ನೀಡಿ, ಈ ಯೋಜನೆಯ ಅನುಷ್ಠಾನದ ಕುರಿತಂತೆ ಪ್ರಗತಿಯನ್ನು ತಿಳಿಸಿರುತ್ತಾರೆ. ಆದುದರಿಂದ, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರಿಗೆ ಅಭಿವೃದ್ಧಿದಾರರು ನೀಡಿರುವ ಉತ್ತರವನ್ನು ಪರಿಶೀಲಿಸಿ ಅಭಿಪ್ರಾಯ ನೀಡುವಂತೆ ದಿನಾಂಕ 15.06.2012ರ ಪತ್ರದಲ್ಲಿ ಕೋರಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ದಿನಾಂಕ 02.03.2013ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ:: ಕೇಪ್ ಇನ್‌ಫ್ರಾಸ್ಟ್ರಕ್ಚರ್ ಪ್ರೈವೇಟ್ ಲಿಮಿಟೆಡ್ ರವರಿಗೆ ದಿನಾಂಕ :19.08.2005 ಹಾಗೂ 14.10.2005 ರ ಸರ್ಕಾರಿ ಆದೇಶದಲ್ಲಿ ಮಂಜೂರಾಗಿರುವ 33.5 ಮೆ.ವ್ಯಾ. ಸಾಮರ್ಥ್ಯದ ಯೋಜನೆಯು ಇದುವರೆಗೂ ಅನುಷ್ಠಾನಗೊಂಡಿರುವುದಿಲ್ಲ ಹಾಗೂ ಈ ಯೋಜನೆ ಸಂಬಂಧ ಅಭಿವೃದ್ದಿದಾರರು ನೀಡಿರುವ ಉತ್ತರವು ಸಮಾಧಾನಕರವಾಗಿರುವುದಿಲ್ಲವಾದ್ದರಿಂದ ಸದರಿ ಸಾಮರ್ಥ್ಯದ ಯೋಜನೆಗಳನ್ನು ರದ್ದು ಪಡಿಸಬಹುದಾಗಿದೆಯೆಂದು ಅಭಿಪ್ರಾಯ ನೀಡಿರುತ್ತಾರೆ.

ಆದ್ದರಿಂದ, ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 57 ಎನ್‌ಸಿಇ 2012, ಬೆಂಗಳೂರು, ದಿನಾಂಕ: 22.08.2013.**

ಮೆ : ಕೇಪ್ ಇನ್‌ಫ್ರಾಸ್ಟ್ರಕ್ಚರ್ ಕಂಪನಿಗೆ ಸರ್ಕಾರಿ ಆದೇಶ ಸಂಖ್ಯೆ : ಇಎನ್ 231 ಎನ್‌ಸಿಇ 2005 ದಿನಾಂಕ :19.08.2005 ರಲ್ಲಿ ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಹಂಚಿಕೆಯಾಗಿರುವ 18.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆ ಹಾಗೂ ಸರ್ಕಾರಿ ಆದೇಶ ಸಂಖ್ಯೆ : ಇಎನ್

289 ಎನ್‌ಸಿಇ 2005 ದಿನಾಂಕ :14.10.2005 ರಲ್ಲಿ ಚಿಕ್ಕಮಗಳೂರು ಮತ್ತು ಹಾಸನ ಜಿಲ್ಲೆಗಳಲ್ಲಿ ಹಂಚಿಕೆಯಾಗಿರುವ 15.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಹಾಗೂ ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ.ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**PR.1167**

**SC.50**

## ಇಂಧನ ಸಚಿವಾಲಯ

**ವಿಷಯ:** ಮೆ: ರವಿ ಊರ್ಜಾ ಎನರ್ಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ತತ್ವಶಃ ಅನುಮತಿ ನೀಡಿರುವ 23 ಮೆ.ವ್ಯಾ. ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 160 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಪತ್ರ ಸಂಖ್ಯೆ : ಇಎನ್ 94 ಎನ್‌ಸಿಇ 2012 ದಿನಾಂಕ : 22.9.2012

2) ಸರ್ಕಾರದ ಪತ್ರ ಸಂಖ್ಯೆ : ಇಎನ್ 126 ಎನ್‌ಸಿಇ 2013(2) ದಿನಾಂಕ : 02.8.2013.

3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: ಕೆಆರ್‌ಇಡಿ/08/RUWIPL-23 to 160 MW/ Belgaum/2013/1772 ದಿನಾಂಕ: 29.7.2013.

**ಪ್ರಸ್ತಾವನೆ:–**

ಮೇಲೆ ಓದಲಾದ (1) ರ ಪತ್ರದಲ್ಲಿ ಮೆ:: ರವಿ ಊರ್ಜಾ ಎನರ್ಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಬೆಳಗಾವಿ ಜಿಲ್ಲೆಯ ಅಥಣಿ ತಾಲ್ಲೂಕಿನ ಕಕ್‌ಮಾರಿ, ಕಿಲಾರದೊಡ್ಡಿ, ತೆಲ್‌ಸಾಂಗ್, ಐಗಲಿ, ರಾಮತೀರ್ಥ, ಪಡತರವಾಡಿ ಮತ್ತು ಬನ್ನೂರು ಗ್ರಾಮಗಳಲ್ಲಿ 23 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನಾ ಘಟಕ ಸ್ಥಾಪಿಸುವ ಬಗ್ಗೆ ವಿಸ್ತೃತ ಯೋಜನಾ ವರದಿಯನ್ನು ಒಂದು ವರ್ಷದೊಳಗೆ ತಯಾರಿಸಿ ಕೆಆರ್‌ಇಡಿಎಲ್‌ಗೆ ಸಲ್ಲಿಸುವ ಷರತ್ತಿಗೊಳಪಟ್ಟು ದಿನಾಂಕ 05.05.2012ರ ಹಂಚಿಕೆ ಸಮಿತಿಯ ನಿರ್ಣಯದಂತೆ ತತ್ವಶಃ ಅನುಮತಿಯನ್ನು ನೀಡಲಾಗಿತ್ತು. ತದನಂತರ, ಸದರಿ ಯೋಜನೆಯ ಕುರಿತ ವಿಸ್ತೃತ ಯೋಜನಾ ವರದಿಯನ್ನು ತಯಾರಿಸಿ ಸಲ್ಲಿಸಲು ಎರಡು ವರ್ಷಗಳ ಕಾಲಾವಕಾಶವನ್ನು ವಿಸ್ತರಿಸಲು ಮೇಲೆ ಓದಲಾದ (2) ರ ಪತ್ರದಲ್ಲಿ ಅನುಮತಿ ನೀಡಲಾಗಿತ್ತು.

ಮೆ : ರವಿ ಊರ್ಜಾ ಎನರ್ಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಬೆಳಗಾವಿ ಜಿಲ್ಲೆಯ ಅಥಣಿ ತಾಲ್ಲೂಕಿನ ಕಕ್‌ಮಾರಿ, ಕಿಲಾರದೊಡ್ಡಿ, ತೆಲ್‌ಸಾಂಗ್, ಐಗಲಿ, ರಾಮತೀರ್ಥ, ಪಡತರವಾಡಿ ಮತ್ತು ಬನ್ನೂರು ಗ್ರಾಮಗಳಲ್ಲಿ ಹಂಚಿಕೆಯಾಗಿರುವ 23.00 ಮೆ.ವ್ಯಾ ಸಾಮರ್ಥ್ಯವನ್ನು 160.00 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸುವ ಕುರಿತಂತೆ ವಿಸ್ತೃತ ಯೋಜನಾ ವರದಿಯನ್ನು ತಯಾರಿಸಿ ಸಲ್ಲಿಸಿರುವುದಾಗಿ ತಿಳಿಸುತ್ತಾ, ಸದರಿ ಸಾಮರ್ಥ್ಯದ ಹೆಚ್ಚಳಕ್ಕೆ ಸಂಬಂಧಿಸಿದ ನಿಗಧಿತ ಶುಲ್ಕ ಪಾವತಿಸಿಕೊಂಡಿರುವುದಾಗಿ, ಈ ಯೋಜನೆಗೆ ಅವಶ್ಯಕವಾದ ಭೂಮಿಯು ಖಾಸಗಿ ಜಮೀನಾಗಿರುವುದಾಗಿ, ಉತ್ಪಾದನೆ ಆಗುವ ವಿದ್ಯುತ್ತನ್ನು ಸಂಬಂಧಿಸಿದ ಎಸ್ಕಾಂನೊಂದಿಗೆ ವಿದ್ಯುತ್ ಖರೀದಿ ಒಪ್ಪಂದ ಮಾಡಿಕೊಳ್ಳುವ ಹಾಗೂ ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟ ಮಾಡುವ ಹಾಗೂ ಬಾಕಿ ಇರುವ ಡಿ.ಪಿ.ಆರ್. ಶುಲ್ಕವನ್ನು ಕೆ.ಆರ್.ಇ.ಡಿ.ಎಲ್.ಗೆ ಪಾವತಿಸುವ ಷರತ್ತಿಗೊಳಪಟ್ಟು ಸಾಮರ್ಥ್ಯವನ್ನು 23.00 ಮೆ.ವ್ಯಾದಿಂದ 160.00 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸಬಹುದೆಂದು ಮೇಲೆ ಓದಲಾದ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಶಿಫಾರಸ್ಸಿನೊಂದಿಗೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 207 ಎನ್‌ಸಿಇ 2013, ಬೆಂಗಳೂರು, ದಿನಾಂಕ: 26.08.2013**

ಸರ್ಕಾರದ ಪತ್ರ ಸಂಖ್ಯೆ : ಇಎನ್ 94 ಎನ್‌ಸಿಇ 2012 ದಿನಾಂಕ : 22.9.2012ರಲ್ಲಿ ಮೆ:: ರವಿ ಊರ್ಜಾ ಎನರ್ಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಬೆಳಗಾವಿ ಜಿಲ್ಲೆಯ ಅಥಣಿ ತಾಲ್ಲೂಕಿನ ಕಕ್‌ಮಾರಿ, ಕಿಲಾರದೊಡ್ಡಿ, ತೆಲ್‌ಸಾಂಗ್, ಐಗಲಿ, ರಾಮತೀರ್ಥ, ಪಡತರವಾಡಿ ಮತ್ತು ಬನ್ನೂರು ಗ್ರಾಮಗಳಲ್ಲಿ ತತ್ವಶಃ ಅನುಮೋದನೆ ನೀಡಿರುವ 23.00 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 160.00 ಮೆ.ವ್ಯಾ.ಗೆ ಹೆಚ್ಚಿಸಿ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು ಆದೇಶಿಸಲಾಗಿದೆ :–

**SHEDULE**

| Topo Sheet No. | Proposed Enhaced capacity in MW | Near by villages of the proposed area Taluk and District. | Geographical area description of the project |
|---|---|---|---|
| 47 P/5 | 160 MW<br><br>(80 Nos x 2000 KW) | Kakmari, Kilardoddi, Telsang, Aigali, Ramtirth, Phadatarwadi and Bannur Villages in Athni Taluk, Belgaum District. | It is a non-plain area, highly varied in its elevation has strong presence of stony waste, plantation and streams. The entire area is situated on the south and west of Kakmari and Telsang villages. The elevation vary from 600 to 676. The area is held in the following Geographical co-ordinates:<br>**Latitude**:16°45'0"- 16°52'4''N<br>**Longitude**:75°15'0''-75°23'56"E<br>**Peaks:** 630, 654, 620, 630, 640, 673, 650, 676 and 668 m Amsl |
| **Total** | **160 MW** | | |

1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 354 ಎನ್‌ಸಿಇ 2008 ದಿನಾಂಕ: 19.01.2010 ಹಾಗೂ ತಿದ್ದುಪಡಿ ಆದೇಶ ಸಂಖ್ಯೆ: ಇಎನ್ 07 ಎನ್‌ಸಿಇ 2011 ದಿನಾಂಕ 18.7.2011ರಲ್ಲಿ ನಿಗದಿಪಡಿಸಿರುವ (ಈ ಯೋಜನಾ ಅವಧಿಯನ್ನು ತತ್ವಶಃ ಅನುಮೋದನೆ ನೀಡಿದ ದಿನಾಂಕ: 22.9.2012ರಿಂದ ಪರಿಗಣಿಸಿ) ಅವಧಿಯೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಅಭಿವೃದ್ಧಿದಾರರು ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್‌ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ಕಂದಾಯ ಇಲಾಖೆಗಳ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು. ಅಭಿವೃದ್ಧಿದಾರರು ಈ ಯೋಜನೆಯನ್ನು ಖಾಸಗಿ ಜಮೀನಿನಲ್ಲಿ ಕೈಗೊಳ್ಳುತ್ತಿರುವುದರಿಂದ, ಖಾಸಗಿ ಜಮೀನಿನ ಮಾಲೀಕರಿಂದ ಒಪ್ಪಿಗೆ ಪತ್ರವನ್ನು ಪಡೆಯತಕ್ಕದ್ದು.
7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ನೀತಿ ನಿಯಮಾನುಸಾರ ವಿದ್ಯುತ್ ಖರೀದಿ ಒಡಂಬಡಿಕೆ / ವೀಲಿಂಗ್ ಮತ್ತು ಬ್ಯಾಂಕಿಂಗನ್ನು 3ನೇ ವ್ಯಕ್ತಿಯೊಂದಿಗೆ ಮಾಡಿಕೊಳ್ಳತಕ್ಕದ್ದು.
8. ಸರ್ಕಾರಿ ಆದೇಶ ಸಂ:ಇಎನ್ 95 ಇಬಿಎಸ್ 2009 ದಿ:29.12.2009ರನ್ವಯ ವಿನಾಯಿತಿ ಸೌಲಭ್ಯಗಳು ಅನ್ವಯಿಸುವುದು.
9. ಯೋಜನೆಯನ್ನು ತ್ವರಿತವಾಗಿ ಅನುಷ್ಠಾನ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವುದು.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆಗೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.
11. ಸದರಿ ಆದೇಶವನ್ನು ರದ್ದುಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ.ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**PR.1168**

**SC.25**

## ಇಂಧನ ಸಚಿವಾಲಯ

**ವಿಷಯ:** ಮೆ : ಖಾನಾಪುರ ಎಲೆಕ್ಟ್ರಿಕ್ ಕಂಪನಿ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಮಂಜೂರಾಗಿರುವ 1.75 ಮೆ.ವ್ಯಾ. ಸಾಮರ್ಥ್ಯದ ಖಾನಾಪುರ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಕಾಶ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಡಿಇ 53 ಎನ್‌ಸಿಇ 2004 ದಿನಾಂಕ: 09.09.2004.

2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 191 ಎನ್‌ಸಿಇ 2007 ದಿನಾಂಕ: 21.06.2007.

3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/SH-178/Khanapur MHS/2013/1072 ದಿನಾಂಕ: 04.05.2013 ಮತ್ತು ಕೆಆರ್‌ಇಡಿ/06/SH-178/Khanapur MHS/2013/ 1547 ದಿನಾಂಕ: 03.07.2013.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ:: ಡಿಪ್‌ಕಿಟ್ ಲಿಮಿಟೆಡ್ (M/s. Dipkit Limited) ಕಂಪನಿಗೆ ಬೆಳಗಾವಿ ಜಿಲ್ಲೆಯ ಖಾನಾಪುರ ತಾಲ್ಲೂಕಿನ ಯಾದವ್‌ಗಿ ಗ್ರಾಮದ ಬಳಿ ಮಲಪ್ರಭಾ ನದಿಗೆ ಅಡ್ಡಲಾಗಿ 1.5 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಕೆಲವೊಂದು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿ ಆದೇಶಿಸಲಾಗಿತ್ತು. ತದನಂತರ ಮೇಲ್ಕಂಡ ಕಂಪನಿಯವರಿಗೆ ಹಂಚಿಕೆಯಾಗಿದ್ದ 1.5 ಮೆ.ವ್ಯಾ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 1.75 ಮೆ.ವ್ಯಾ.ಗೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಹೆಚ್ಚಿಸಿ ಹಾಗೂ ಯೋಜನೆಯನ್ನು ಮೆ : ಖಾನಾಪುರ ಎಲೆಕ್ಟ್ರಿಕ್ ಕಂಪನಿ ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರಿನಲ್ಲಿ ಅನುಷ್ಠಾನಗೊಳಿಸಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರಗಳಲ್ಲಿ ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರು ಮೆ: ಖಾನಾಪುರ ಎಲೆಕ್ಟ್ರಿಕ್ ಕಂಪನಿ ಪ್ರೈವೇಟ್ ಲಿಮಿಟೆಡ್ ಇವರಿಗೆ ಬೆಳಗಾವಿ ಜಿಲ್ಲೆಯ ಖಾನಾಪುರ ತಾಲ್ಲೂಕಿನ ಯಾದವ್‌ಗಿ ಗ್ರಾಮದ ಬಳಿ ಮಲಪ್ರಭಾ ನದಿಗೆ ಅಡ್ಡಲಾಗಿ ಮಂಜೂರಾಗಿರುವ 1.75 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ನೀಡಿದ್ದ ಕಾಲಾವಕಾಶವು ದಿನಾಂಕ 31.08.2010ಕ್ಕೆ ಮುಕ್ತಾಯಗೊಂಡಿದ್ದು, ಅಭಿವೃದ್ದಿದಾರರು ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಕಾರ್ಯನಿರತರಾಗಿದ್ದು, ಜಲಸಂಪನ್ಮೂಲ ಇಲಾಖೆಯನ್ನು ಹೊರತುಪಡಿಸಿ, ಸಂಬಂಧಿಸಿದ ಇತರೆ ಇಲಾಖೆ / ಸಂಸ್ಥೆಗಳಿಂದ ನಿರಾಕ್ಷೇಪಣೆಯನ್ನು ಪಡೆದಿರುವುದಾಗಿ ತಿಳಿಸಿದ್ದು, ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶ ವಿಸ್ತರಣಾ ಶುಲ್ಕ ಮತ್ತು ಪ್ರತಿ ಮೆಗಾ ವ್ಯಾಟ್‌ಗೆ ₹ 3.00 ಲಕ್ಷಗಳ ನೆರವೇರಿಕೆ ಖಾತರಿ ಪಾವತಿಸುವ ಷರತ್ತಿಗೊಳಪಟ್ಟು ದಿನಾಂಕ 09.09.2010ರಿಂದ 30.09.2014ರವರೆಗೆ ಒಟ್ಟು ನಾಲ್ಕು ವರ್ಷಗಳ ಕಾಲಾವಕಾಶವನ್ನು ವಿಸ್ತರಿಸಬಹುದೆಂದು ಶಿಫಾರಸ್ಸಿಸಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ, ಮೆ:: ಖಾನಾಪುರ ಎಲೆಕ್ಟ್ರಿಕ್ ಕಂಪನಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಯೋಜನೆಯನ್ನು ಸರ್ಕಾರಿ ಆದೇಶ ಸಂಖ್ಯೆ: ಡಿಇ 53 ಎನ್‌ಸಿಇ 2004 ದಿನಾಂಕ: 09.09.2004ರಲ್ಲಿ ಹಂಚಿಕೆ ಮಾಡಲಾಗಿದೆ. ಸರ್ಕಾರದ ಆದೇಶ ಸಂಖ್ಯೆ: ಇಎನ್ 354 ಎನ್‌ಸಿಇ 2008 ದಿನಾಂಕ 19.1.2010ರ ಇಂಧನ ನೀತಿ ಹಾಗೂ ತಿದ್ದುಪಡಿ ಆದೇಶ ಸಂಖ್ಯೆ: ಇಎನ್ 07 ಎನ್‌ಸಿಇ 2011 ದಿನಾಂಕ: 18.07.2011 ರನ್ವಯ ಕಿರು ಜಲ ವಿದ್ಯುತ್ ಯೋಜನೆ ಅನುಷ್ಠಾನಕ್ಕೆ 5 ವರ್ಷಗಳ ಕಾಲಾವಧಿ ನಿಗದಿ ಪಡಿಸಲಾಗಿದೆ. ಈ ಹಿನ್ನೆಲೆಯಲ್ಲಿ ಮೆ:: ಖಾನಾಪುರ ಎಲೆಕ್ಟ್ರಿಕ್ ಕಂಪನಿ ಪ್ರೈವೇಟ್ ಲಿಮಿಟೆಡ್ ರವರಿಗೆ ಹಂಚಿಕೆಯಾಗಿರುವ ಈ ಯೋಜನೆಯ ಅನುಷ್ಠಾನಕ್ಕೆ ದಿನಾಂಕ 08.09.2009 ರವರೆಗೆ ಕಾಲಾವಧಿ ಇರುತ್ತದೆ. ಅದರಂತೆ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 149 ಎನ್‌ಸಿಇ 2013, ಬೆಂಗಳೂರು, ದಿನಾಂಕ: 06.09.2013.**

ಮೆ: ಖಾನಾಪುರ ಎಲೆಕ್ಟ್ರಿಕ್ ಕಂಪನಿ ಪ್ರೈವೇಟ್ ಲಿಮಿಟೆಡ್ ಇವರಿಗೆ ಬೆಳಗಾವಿ ಜಿಲ್ಲೆಯ ಖಾನಾಪುರ ತಾಲ್ಲೂಕಿನ ಯಾದವ್‌ಗಿ ಗ್ರಾಮದ ಬಳಿ ಮಲಪ್ರಭಾ ನದಿಗೆ ಅಡ್ಡಲಾಗಿ ಮಂಜೂರಾಗಿರುವ 1.75 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ಕೆಳಕಂಡ ಷರತ್ತಿಗೊಳಪಟ್ಟು ದಿನಾಂಕ 09.09.2009ರಿಂದ 30.09.2014ರವರೆಗೆ ವಿಸ್ತರಿಸಿ ಆದೇಶಿಸಿದೆ.

1. ಅಭಿವೃದ್ದಿದಾರರು ನಿಗಧಿತ ಕಾಲಾವಧಿ ವಿಸ್ತರಣಾ ಶುಲ್ಕ ಮತ್ತು ಪ್ರತಿ ಮೆಗಾ ವ್ಯಾಟ್‌ಗೆ ₹ 3.00 ಲಕ್ಷಗಳ ನೆರವೇರಿಕೆ ಖಾತರಿಯನ್ನು ಕೆ.ಆರ್.ಇ.ಡಿ.ಎಲ್. ಸಂಸ್ಥೆಗೆ ಪಾವತಿಸತಕ್ಕದ್ದು.
2. ಈ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ.ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**PR.1170**
**SC.25**

## ಇಂಧನ ಸಚಿವಾಲಯ

**ವಿಷಯ:** ಮೆ : ಮಾನಸ ಗಂಗೋತ್ರಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಹಂಚಿಕೆಯಾಗಿರುವ 3.00 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಕಾಶ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 236 ಎನ್‌ಸಿಇ 2009 ದಿನಾಂಕ: 25.11.2009.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/SH-339/Baburayanakoppallu MHS/ 2013/830 ದಿನಾಂಕ: 02.04.2013 ಮತ್ತು ಕೆಆರ್‌ಇಡಿ/06/SH-339/ Baburayanakoppallu MHS/ 2013/1151 ದಿನಾಂಕ: 17.05.2013.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ:: ಮಾನಸ ಗಂಗೋತ್ರಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕಿನ ಬಾಬುರಾಯನಕೊಪ್ಪಲು ಗ್ರಾಮದ ಬಳಿ ಲೋಕಪಾವನಿ ನದಿಗೆ ಅಡ್ಡಲಾಗಿ 3.00 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಕೆಲವೊಂದು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರಗಳಲ್ಲಿ ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರು ಮೆ:: ಮಾನಸ ಗಂಗೋತ್ರಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕಿನ ಬಾಬುರಾಯನಕೊಪ್ಪಲು ಗ್ರಾಮದ ಬಳಿ ಲೋಕಪಾವನಿ ನದಿಗೆ ಅಡ್ಡಲಾಗಿ ಹಂಚಿಕೆಯಾಗಿರುವ 3.00 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ನೀಡಿದ್ದ ಕಾಲಾವಕಾಶವು ದಿನಾಂಕ 04.02.2012ಕ್ಕೆ ಮುಕ್ತಾಯಗೊಂಡಿದ್ದು, ಅಭಿವೃದ್ದಿದಾರರು ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಕಾರ್ಯನಿರತರಾಗಿದ್ದು, ಅರಣ್ಯ, ಪರಿಸರ, ಜೀವಿಶಾಸ್ತ್ರ ಇಲಾಖೆ ಹಾಗೂ ಕೆ.ಪಿ.ಟಿ.ಸಿ.ಎಲ್. ಸಂಸ್ಥೆಯ ಅನುಮೋದನೆ ಪಡೆಯುವ ಪ್ರಕ್ರಿಯೆ ಜಾರಿಯಲ್ಲಿರುವುದಾಗಿ, ಸಂಬಂಧಿಸಿದ ಇತರೆ

ಇಲಾಖೆಗಳಿಂದ ಅನುಮೋದನೆ ಪಡೆದಿರುವುದಾಗಿ ತಿಳಿಸುತ್ತಾ, ಅಭಿವೃದ್ಧಿದಾರರು ಯೋಜನೆಯನ್ನು ಅನುಷ್ಠಾನಗೊಳಿಸುವ ಆಸಕ್ತಿ ಹೊಂದಿರುವ ಹಿನ್ನೆಲೆಯಲ್ಲಿ ಪ್ರತಿ ಮೆಗಾ ವ್ಯಾಟ್‌ಗೆ ₹ 3.00 ಲಕ್ಷಗಳ ನೆರವೇರಿಕೆ ಖಾತರಿ ಹಾಗೂ ನಿಗದಿತ ಕಾಲಾವಕಾಶ ವಿಸ್ತರಣಾ ಶುಲ್ಕ ಪಾವತಿಸುವ ಷರತ್ತಿಗೊಳಪಟ್ಟು ದಿನಾಂಕ 05.02.2012ರಿಂದ 04.02.2015ರವರೆಗೆ ಕಾಲಾವಕಾಶವನ್ನು ವಿಸ್ತರಿಸಬಹುದೆಂದು ಶಿಫಾರಸ್ಸಿಸಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ ಮೆ:: ಮಾನಸ ಗಂಗೋತ್ರಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಯೋಜನೆಯನ್ನು ಸರ್ಕಾರಿ ಆದೇಶ ಸಂಖ್ಯೆ : ಇಎನ್ 236 ಎನ್‌ಸಿಇ 2009 ದಿನಾಂಕ: 25.11.2009ರಲ್ಲಿ ಹಂಚಿಕೆ ಮಾಡಲಾಗಿದೆ. ಸರ್ಕಾರದ ಆದೇಶ ಸಂಖ್ಯೆ: ಇಎನ್ 354 ಎನ್‌ಸಿಇ 2008 ದಿನಾಂಕ 19.1.2010ರ ಇಂಧನ ನೀತಿ ಹಾಗೂ ತಿದ್ದುಪಡಿ ಆದೇಶ ಸಂಖ್ಯೆ: ಇಎನ್ 07 ಎನ್‌ಸಿಇ 2011 ದಿನಾಂಕ: 18.07.2011 ರನ್ವಯ ಕಿರು ಜಲ ವಿದ್ಯುತ್ ಯೋಜನೆ ಅನುಷ್ಠಾನಕ್ಕೆ 5 ವರ್ಷಗಳ ಕಾಲಾವಧಿ ನಿಗದಿ ಪಡಿಸಲಾಗಿದೆ. ಈ ಹಿನ್ನೆಲೆಯಲ್ಲಿ ಮೆ:: ಮಾನಸ ಗಂಗೋತ್ರಿ ಪವರ್ ಪ್ರೈವೇಟ್ ಲಿಮಿಟೆಡ್ ರವರಿಗೆ ಹಂಚಿಕೆಯಾಗಿರುವ ಈ ಯೋಜನೆಯ ಅನುಷ್ಠಾನಕ್ಕೆ 24.11.2014 ರವರೆಗೆ ಕಾಲಾವಧಿ ಇರುತ್ತದೆ. ಅದರಂತೆ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 134 ಎನ್‌ಸಿಇ 2013, ಬೆಂಗಳೂರು, ದಿನಾಂಕ: 06.09.2013.**

ಮೆ:: ಮಾನಸ ಗಂಗೋತ್ರಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕಿನ ಬಾಬುರಾಯನಕೊಪ್ಪಲು ಗ್ರಾಮದ ಬಳಿ ಲೋಕಪಾವನಿ ನದಿಗೆ ಅಡ್ಡಲಾಗಿ ಹಂಚಿಕೆಯಾಗಿರುವ 3.00 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ಸರ್ಕಾರದ ಇಂಧನ ನೀತಿ ಮತ್ತು ಈ ಕುರಿತು ಹೊರಡಿಸಿರುವ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ ಇಎನ್ 07 ಎನ್‌ಸಿಇ 2011 ದಿನಾಂಕ 18.7.2011 ರನ್ವಯ ಕಾಲಾವಧಿಯನ್ನು ದಿನಾಂಕ: 24.11.2014 ರವರೆಗೆ ವಿಸ್ತರಿಸಿ ಆದೇಶಿಸಿದೆ.

1. ಸರ್ಕಾರದ ಆದೇಶ ಸಂಖ್ಯೆ ಇಎನ್ 236 ಎನ್‌ಸಿಇ 2009 ದಿನಾಂಕ: 25.11.2009ರ ಆದೇಶದಲ್ಲಿರುವ ಎಲ್ಲಾ ಷರತ್ತುಗಳು ಮುಂದುವರಿಯುತ್ತದೆ.
2. ಈ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**PR.1171**
**SC.25**

## ಇಂಧನ ಸಚಿವಾಲಯ

**ವಿಷಯ:** ಮೆ : ಜೆಂಪ್ರೊ ಇಂಟರ್‌ನ್ಯಾಶನಲ್ ಲಿಮಿಟೆಡ್ ಕಂಪನಿಯವರಿಗೆ ಹಂಚಿಕೆಯಾಗಿರುವ 1.5 ಮೆ.ವ್ಯಾ. ಸಾಮರ್ಥ್ಯದ ಅಸೋಗ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಕಾಶ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 141 ಎನ್‌ಸಿಇ 2006 ದಿನಾಂಕ: 21.04.2006.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/SH-242/Asoga MHS/2013/1073 ದಿನಾಂಕ: 04.05.2013 ಮತ್ತು ಕೆಆರ್‌ಇಡಿ /06 /SH -242/ Asoga MHS/2013/1546 ದಿನಾಂಕ: 03.07.2013.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ:: ಜೆಂಪ್ರೊ ಇಂಟರ್‌ನ್ಯಾಶನಲ್ ಲಿಮಿಟೆಡ್ ಕಂಪನಿಗೆ ಬೆಳಗಾವಿ ಜಿಲ್ಲೆಯ ಖಾನಾಪುರ ತಾಲ್ಲೂಕಿನ ಅಸೊಗ ಗ್ರಾಮದ ಬಳಿ ಮಲಪ್ರಭಾ ನದಿಗೆ ಅಡ್ಡಲಾಗಿ 1.5 ಮೆ.ವ್ಯಾ. ಸಾಮರ್ಥ್ಯದ ಅಸೊಗ ಕಿರು ಜಲ ವಿದ್ಯುತ್ ಯೋಜನೆಯನ್ನು ಜಲಸಂಪನ್ಮೂಲ ಇಲಾಖೆಯ ಅನುಮತಿ ಹಾಗೂ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು ಎಂಬ ಷರತ್ತಿನೊಂದಿಗೆ ಇತರೆ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರಗಳಲ್ಲಿ ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರು ಮೆ:: ಜೆಂಪ್ರೊ ಇಂಟರ್‌ನ್ಯಾಶನಲ್ ಲಿಮಿಟೆಡ್ ಕಂಪನಿಗೆ ಬೆಳಗಾವಿ ಜಿಲ್ಲೆಯ ಖಾನಾಪುರ ತಾಲ್ಲೂಕಿನ ಅಸೊಗ ಗ್ರಾಮದ ಬಳಿ ಮಲಪ್ರಭಾ ನದಿಗೆ ಅಡ್ಡಲಾಗಿ ಹಂಚಿಕೆಯಾಗಿರುವ 1.5 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಕಾಲಾವಕಾಶವು ದಿನಾಂಕ 31.08.2009ಕ್ಕೆ ಮುಕ್ತಾಯಗೊಂಡಿದ್ದು, ಅಭಿವೃದ್ದಿದಾರರು ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಕಾರ್ಯನಿರತರಾಗಿದ್ದು, ಜಲಸಂಪನ್ಮೂಲ ಇಲಾಖೆಯನ್ನು ಹೊರತುಪಡಿಸಿ ಸಂಬಂಧಿಸಿದ ಇತರೆ ಇಲಾಖೆ / ಸಂಸ್ಥೆಗಳಿಂದ ನಿರಾಕ್ಷೇಪಣೆಯನ್ನು ಪಡೆದಿದ್ದು, ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶ ವಿಸ್ತರಣಾ ಶುಲ್ಕ ಮತ್ತು ಪ್ರತಿ ಮೆಗಾ ವ್ಯಾಟ್‌ಗೆ ₹ 3.00 ಲಕ್ಷಗಳ ನೆರವೇರಿಕೆ ಖಾತರಿ ಪಾವತಿಸುವ ಷರತ್ತಿಗೊಳಪಟ್ಟು ದಿನಾಂಕ 01.09.2009ರಿಂದ 30.09.2014ರವರೆಗೆ ಕಾಲಾವಕಾಶವನ್ನು ವಿಸ್ತರಿಸಬಹುದೆಂದು ಶಿಫಾರಸ್ಸಿಸಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ, ಮೆ:: ಜೆಂಪ್ರೊ ಇಂಟರ್‌ನ್ಯಾಶನಲ್ ಲಿಮಿಟೆಡ್ ಕಂಪನಿಗೆ ಯೋಜನೆಯನ್ನು ಸರ್ಕಾರಿ ಆದೇಶ ಸಂಖ್ಯೆ : ಇಎನ್ 141 ಎನ್‌ಸಿಇ 2006 ದಿನಾಂಕ: 21.04.2006ರಲ್ಲಿ ಹಂಚಿಕೆ ಮಾಡಲಾಗಿದೆ. ಸರ್ಕಾರದ ಆದೇಶ ಸಂಖ್ಯೆ: ಇಎನ್ 354 ಎನ್‌ಸಿಇ 2008 ದಿನಾಂಕ 19.1.2010ರ ಇಂಧನ ನೀತಿ ಹಾಗೂ ತಿದ್ದುಪಡಿ ಆದೇಶ ಸಂಖ್ಯೆ: ಇಎನ್ 07 ಎನ್‌ಸಿಇ 2011 ದಿನಾಂಕ: 18.07.2011 ರನ್ವಯ ಕಿರು ಜಲ ವಿದ್ಯುತ್ ಯೋಜನೆ ಅನುಷ್ಠಾನಕ್ಕೆ 5 ವರ್ಷಗಳ ಕಾಲಾವಧಿ ನಿಗದಿ ಪಡಿಸಲಾಗಿದೆ. ಈ ಹಿನ್ನೆಲೆಯಲ್ಲಿ ಮೆ:: ಜೆಂಪ್ರೊ ಇಂಟರ್‌ನ್ಯಾಶನಲ್ ಲಿಮಿಟೆಡ್ ರವರಿಗೆ ಹಂಚಿಕೆಯಾಗಿರುವ ಈ ಯೋಜನೆಯ ಅನುಷ್ಠಾನಕ್ಕೆ 20.04.2011 ರವರೆಗೆ ಕಾಲಾವಧಿ ಇರುತ್ತದೆ. ಅದರಂತೆ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 150 ಎನ್‌ಸಿಇ 2013, ಬೆಂಗಳೂರು, ದಿನಾಂಕ: 06.9.2013.**

ಮೆ:: ಜೆಂಪ್ರೊ ಇಂಟರ್‌ನ್ಯಾಶನಲ್ ಲಿಮಿಟೆಡ್ ಕಂಪನಿಗೆ ಬೆಳಗಾವಿ ಜಿಲ್ಲೆಯ ಖಾನಾಪುರ ತಾಲ್ಲೂಕಿನ ಅಸೊಗ ಗ್ರಾಮದ ಬಳಿ ಮಲಪ್ರಭಾ ನದಿಗೆ ಅಡ್ಡಲಾಗಿ ಹಂಚಿಕೆಯಾಗಿರುವ 1.5 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶವನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ಕಾಲಾವಧಿಯನ್ನು ದಿನಾಂಕ 21.4.2011ರಿಂದ ದಿನಾಂಕ: 30.09.2014 ರವರೆಗೆ ವಿಸ್ತರಿಸಿ ಆದೇಶಿಸಿದೆ.

1) ಅಭಿವೃದ್ದಿದಾರರು ನಿಗಧಿತ ಕಾಲಾವಧಿ ವಿಸ್ತರಣಾ ಶುಲ್ಕ ಮತ್ತು ಪ್ರತಿ ಮೆಗಾ ವ್ಯಾಟ್‌ಗೆ ₹ 3.00 ಲಕ್ಷಗಳ ನೆರವೇರಿಕೆ ಖಾತರಿಯನ್ನು ಕೆ.ಆರ್.ಇ.ಡಿ.ಎಲ್. ಸಂಸ್ಥೆಗೆ ಪಾವತಿಸತಕ್ಕದ್ದು.

2) ಈ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ.ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

PR.1172

SC.25

## ಇಂಧನ ಸಚಿವಾಲಯ

**ವಿಷಯ:** ಮೆ: ಎನರ್ಕಾನ್ ಇಂಡಿಯಾ ಲಿಮಿಟೆಡ್ ಕಂಪನಿಯವರಿಗೆ ಹಂಚಿಕೆಯಾಗಿರುವ 192 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ ಅನುಷ್ಠಾನಕ್ಕೆ ಬಾಕಿ ಇರುವ 20.00 ಮೆ.ವ್ಯಾ ಸಾಮರ್ಥ್ಯವನ್ನು ಮೆ: ಗ್ರೀನ್ ಇನ್ಫ್ರಾ ವಿಂಡ್ ಪವರ್ ಜನರೇಷನ್ ಲಿಮಿಟೆಡ್ ರವರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 198 ಎನ್‌ಸಿಇ 2005 ದಿನಾಂಕ: 18.08.2005.

2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 60 ಎನ್‌ಸಿಇ 2006 ದಿನಾಂಕ: 10.2.2006.

3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 65 ಎನ್‌ಸಿಇ 2009 ದಿನಾಂಕ: 13.03.2009.

4) ಸರ್ಕಾರಿ ಆದೇಶ ಸಂಖ್ಯೆ: ಇಎನ್ 158 ಎನ್‌ಸಿಇ 2013 ದಿನಾಂಕ: 06.07.2013.

5) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/GIWPGL-20 MW (EIL-192 MW)/ 2013/1912 ದಿನಾಂಕ: 20.08.2013.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ಎನರ್ಕಾನ್ ಇಂಡಿಯಾ ಲಿಮಿಟೆಡ್ ಕಂಪನಿಗೆ ಬೆಳಗಾವಿ ಜಿಲ್ಲೆಯ ವಿವಿಧ ಪ್ರದೇಶಗಳಲ್ಲಿ 102.4 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಲವೊಂದು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು. ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸದರಿ 102.4 ಮೆ.ವ್ಯಾ. ಸಾಮರ್ಥ್ಯವನ್ನು 192 ಮೆ.ವ್ಯಾಗೆ ಹೆಚ್ಚಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ಎನರ್ಕಾನ್ ಇಂಡಿಯಾ ಲಿಮಿಟೆಡ್ ಕಂಪನಿಗೆ ಬೆಳಗಾವಿ ಜಿಲ್ಲೆಯ ವಿವಿಧ ಪ್ರದೇಶಗಳಲ್ಲಿ ಮಂಜೂರಾಗಿರುವ 192 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ ಅಂಶಿಕ ಸಾಮರ್ಥ್ಯವಾದ 63.2 ಮೆ.ವ್ಯಾ ಸಾಮರ್ಥ್ಯವನ್ನು ಮೆ: ಸಿಎಲ್‌ಪಿ ವಿಂಡ್ ಫಾಮ್ಸ್ ಇಂಡಿಯಾ ಪ್ರೈ ಲಿ ಇವರಿಗೆ ವರ್ಗಾಯಿಸಿ ಆದೇಶಿಸಲಾಗಿರುತ್ತದೆ. ಸದರಿ 192 ಮೆ.ವ್ಯಾ. ಸಾಮರ್ಥ್ಯದಲ್ಲಿ ಅನುಷ್ಠಾನಕ್ಕೆ ಯೋಗ್ಯವಲ್ಲದ 108.8 ಮೆ.ವ್ಯಾ. (ರಾಮದುರ್ಗ ಮತ್ತು ಮುರುಗೋಡು ಪ್ರದೇಶಗಳಲ್ಲಿ) ಸಾಮರ್ಥ್ಯದ ಯೋಜನೆಯನ್ನು ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರದ್ದು ಪಡಿಸಿ ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ಎನರ್ಕಾನ್ ಇಂಡಿಯಾ ಲಿಮಿಟೆಡ್ ಕಂಪನಿಯವರಿಗೆ ಬೆಳಗಾವಿ ಜಿಲ್ಲೆಯ ವಿವಿಧ ಪ್ರದೇಶಗಳಲ್ಲಿ ಮಂಜೂರಾಗಿರುವ 192 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ ವಿವಿಧ ಅದೇಶಗಳನ್ವಯ 63.2 ಮೆ.ವ್ಯಾ. ಸಾಮರ್ಥ್ಯವನ್ನು ವರ್ಗಾವಣೆಗೊಳಿಸಿರುವುದಾಗಿ, 108.8 ಮೆ.ವ್ಯಾ. ಸಾಮರ್ಥ್ಯವನ್ನು ರದ್ದುಗೊಳಿಸಿರುವುದನ್ನು ಹೊರತುಪಡಿಸಿ ಅನುಷ್ಠಾನಕ್ಕೆ ಬಾಕಿ ಉಳಿದಿರುವ 20.00 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ: ಗ್ರೀನ್ ಇನ್ಫ್ರಾ ವಿಂಡ್ ಪವರ್ ಜನರೇಷನ್ ಲಿಮಿಟೆಡ್ ರವರಿಗೆ ವರ್ಗಾಯಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಯೋಜನೆಗೆ ಅವಶ್ಯಕವಾದ ಭೂಮಿಯು ಅರಣ್ಯ ಜಮೀನಾಗಿದ್ದು, ಅರಣ್ಯ ಇಲಾಖೆಯ ಸಹಮತಿಯನ್ನು ಪಡೆದಿರುವುದಾಗಿ ತಿಳಿಸುತ್ತಾ, ಈ ಯೋಜನೆಯನ್ನು ದಿನಾಂಕ 31.03.2014ರೊಳಗಾಗಿ ಅನುಷ್ಠಾನಗೊಳಿಸುವುದು ಹಾಗೂ ಉತ್ಪಾದನೆ ಆಗುವ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ ಗ್ರೂಪ್ ಕ್ಯಾಪ್ಟೀವ್ ಬಳಕೆ ಮಾಡಿಕೊಳ್ಳುವುದಾಗಿ ತಿಳಿಸುತ್ತಾ ವರ್ಗಾವಣೆ ಪ್ರಸ್ತಾವನೆಯನ್ನು ಶಿಫಾರಸ್ಸಿಸಿ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 225 ಎನ್‌ಸಿಇ 2013, ಬೆಂಗಳೂರು, ದಿನಾಂಕ: 13.09.2013.**

ಮೆ : ಎನರ್ಕಾನ್ ಇಂಡಿಯಾ ಲಿಮಿಟೆಡ್ ರವರಿಗೆ ಬೆಳಗಾವಿ ಜಿಲ್ಲೆಯ ವಿವಿಧ ಪ್ರದೇಶಗಳಲ್ಲಿ ಹಂಚಿಕೆಯಾಗಿದ್ದ 192 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ ಅನುಷ್ಠಾನಕ್ಕೆ ಬಾಕಿ ಇರುವ 20.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ: ಗ್ರೀನ್ ಇನ್ಫ್ರಾ ವಿಂಡ್ ಪವರ್ ಜನರೇಷನ್ ಲಿಮಿಟೆಡ್ ರವರಿಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು **ವರ್ಗಾಯಿಸಲಾಗಿದೆ:–**

| Description of area |
|---|
| The proposed area is has two independent hill ranges, of that, one is oriented predominantly in E-W direction and another is in the NW-SE direction and is identified as "B". These areas are located on the S-E of Rampur town. These areas are having rocky knobs and are having open scrub features. the proposed areas are covered in the following Geographical co-ordinates:<br>Latitude: 15°52'36'- 15°55'17'' N<br>Longitude: 75°17'58'- 75°23'42'' E<br>Ridge Peaks: 742, 755, 742, 708 & 672 m Amsl |

| Sl.N | Village Name | Taluk/ District | MW | Land Survey number | WTG's No | Latitude and Longitude |
|---|---|---|---|---|---|---|
| 1 | Kolachi | Ramadurga/ Belgaum | 0.8 | 53/A | (11) 51 | Lat: 15°54'17.1" N<br>Long: 75°21'53.4'' E |
| 2 | Kolachi | | 0.8 | 53/A | (12) 52 | Lat: 15°54'11.2" N<br>Long: 75°21'55.4'' E |
| 3 | Kolachi | | 0.8 | 54 | (13) 53 | Lat: 15°54'5.1" N<br>Long: 75°21'58.6'' E |
| 4 | Manihala | | 0.8 | 90 | (14) 54 | Lat: 15°53'43.2" N<br>Long: 75°22'7.2'' E |
| 5 | Manihala | | 0.8 | 90 | (15) 55 | Lat: 15°53'37.2" N<br>Long: 75°22'9.9'' E |
| 6 | Manihala | | 0.8 | 90 | (16) 56 | Lat: 15°53'31.9" N<br>Long: 75°22'12.4'' E |
| 7 | Manihala | | 0.8 | 90 | (17) 57 | Lat: 15°53'25.8" N<br>Long: 75°22'15.2'' E |
| 8 | Manihala | | 0.8 | 90 | (18) 58 | Lat: 15°53'7.5" N<br>Long: 75°22'21.9'' E |
| 9 | Jalikatti | | 0.8 | 12/A | (19) 59 | Lat: 15°53'0.9" N<br>Long: 75°22'23.1'' E |
| 10 | Jalikatti | | 0.8 | 12/A | (20) 60 | Lat: 15°52'53.9" N<br>Long: 75°22'22.6'' E |
| 11 | Jalikatti | | 0.8 | 12/A | (21) 61 | Lat: 15°52'48.8" N<br>Long: 75°22'26'' E |
| 12 | Manihala | | 0.8 | 90 | (22) 62 | Lat: 15°52'56.7" N<br>Long: 75°22'40.9' E |
| 13 | Manihala | | 0.8 | 90 | (23) 63 | Lat: 15°53'3.4" N<br>Long: 75°22'39.8'' E |
| 14 | Manihala | | 0.8 | 90 | (24) 64 | Lat: 15°52'58.6" N<br>Long: 75°22'57.4'' E |
| 15 | Jalikatti | | 0.8 | 12/A | (25) 65 | Lat: 15°53'9.8'' N<br>Long: 75°21'58.8'' E |
| 16 | Jalikatti | | 0.8 | 11/A | (26) 66 | Lat: 15°53'8.6" N<br>Long: 75°21'15.7'' E |
| 17 | Jalikatti | | 0.8 | 11/A | (27) 67 | Lat: 15°53'14.6" N<br>Long: 75°21'13.2'' E |
| 18 | Kolachi | | 0.8 | 54 | (28) 68 | Lat: 15°53'20.5" N<br>Long: 75°21'10.4'' E |
| 19 | Lakhinaikanakop | | 0.8 | 7 | (29) 69 | Lat: 15°53'11.1" N<br>Long: 75°19'53.6'' E |
| 20 | Lakhinaikanakop | | 0.8 | 7 | (30) 70 | Lat: 15°53'16.7" N<br>Long: 75°19'50.5'' E |
| 21 | Lakhinaikanakop | | 0.8 | 7 | (31) 71 | Lat: 15°53'22.2" N<br>Long: 75°19'46.6'' E |

| Sl.N | Village Name | Taluk/ District | MW | Land Survey number | WTG's No | Latitude and Longitude |
|---|---|---|---|---|---|---|
| 22 | Lakhinaikanakop | Ramadurga/ Belgaum | 0.8 | 7 | (32) 72 | Lat: 15°53'27.3" N<br>Long: 75°19'41'' E |
| 23 | Lakhinaikanakop | | 0.8 | 7 | (33) 73 | Lat: 15°53'31.4" N<br>Long: 75°19'33.5'' E |
| 24 | Kallur | | 0.8 | 85/A | (34) 74 | Lat: 15°53'36.7" N<br>Long: 75°19'24.5'' E |
| 25 | Kallur | | 0.8 | 85/A | (35) 75 | Lat: 15°53'41.6" N<br>Long: 75°19'20.3'' E |
| | | | **20.00** | | | |

1 **ಮೆ::** ಗ್ರೀನ್ ಇನ್ಫ್ರಾ ವಿಂಡ್ ಪವರ್ ಜನರೇಷನ್ ಲಿಮಿಟೆಡ್ ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2 ಯೋಜನೆಯಿಂದ ಉತ್ಪಾದಿಸುವ ವಿದ್ಯುತ್ತನ್ನು ಪಿ.ಪಿ.ಎ./ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ ಗ್ರೂಪ್ ಕ್ಯಾಪ್ಟೀವ್ ಮಾಡಲು ಸಂಬಂಧಪಟ್ಟ ಎಸ್ಕಾಂಗಳೊಂದಿಗೆ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

3 ಸದರಿ ಯೋಜನೆಯನ್ನು ದಿನಾಂಕ 31.3.2014ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು. ನಿಗದಿತ ಅವಧಿಯೊಳಗೆ ಯೋಜನೆಯನ್ನು ಅನುಷ್ಠಾನಗೊಳಿಸದಿದ್ದಲ್ಲಿ, ನಿಯಮಾನುಸಾರ ಯೋಜನೆಯ ಹಂಚಿಕೆಯನ್ನು ರದ್ದುಗೊಳಿಸಲಾಗುವುದು ಮತ್ತು ಸೂಕ್ತ ದಂಡವಿಧಿಸಲಾಗುವುದು.

4 ಯೋಜನೆಯ ಪ್ರಗತಿ ಕುರಿತು ಅಭಿವೃದ್ದಿದಾರರು ಪ್ರತಿ 6 ತಿಂಗಳಿಗೊಮ್ಮೆ ಕೆಆರ್‌ಇಡಿಎಲ್ ಸಂಸ್ಥೆಗೆ ಪ್ರಗತಿ ವರದಿ ಸಲ್ಲಿಸತಕ್ಕದ್ದು.

5 ಸದರಿ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಉಲ್ಲೇಖಿತ ಹಂಚಿಕೆ ಆದೇಶಗಳಲ್ಲಿರುವ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**PR.1173**
**SC.25**

## ಇಂಧನ ಸಚಿವಾಲಯ

**ವಿಷಯ:** ಮೆ:: ಫಾರ್ಚುನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಹಂಚಿಕೆಯಾಗಿರುವ 128.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 15.00 ಮೆ.ವ್ಯಾ. ಸಾಮರ್ಥ್ಯವನ್ನು ಮೆ: ಮ್ಯಾಟ್ರಿಕ್ಸ್ ಪವರ್ (ವಿಂಡ್) ಪ್ರೈವೇಟ್ ಲಿಮಿಟೆಡ್ ರವರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 316 ಎನ್‌ಸಿಇ 2006 ದಿನಾಂಕ: 16.10.2006.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 253 ಎನ್‌ಸಿಇ 2011 ದಿನಾಂಕ: 02.01.2012.
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 143 ಎನ್‌ಸಿಇ 2012 ದಿನಾಂಕ: 24.01.2013
4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/MPWPL-15 MW(FFHPPL-128 MW)/2013/1916 ದಿನಾಂಕ: 20.08.2013

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ಫಾರ್ಚುನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ಬಿಜಾಪುರ ಜಿಲ್ಲೆಯ ವಿವಿಧ ಪ್ರದೇಶಗಳಲ್ಲಿ 62.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು. ಸದರಿ ಕಂಪನಿಗೆ ಮಂಜೂರಾಗಿರುವ 62.00 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ ಬಿಜಾಪುರ ಜಿಲ್ಲೆಯ ಇಂಗಳೇಶ್ವರ, ರಾಬಿನಹಾಳ್, ರಾಮನಹಟ್ಟಿ, ಹಂಚಿನಾಳ್, ಸಾಲವಡಗಿ, ಬೂದಿಹಾಳ್ ಗ್ರಾಮಗಳಲ್ಲಿರುವ ಅಂಶಿಕ ಸಾಮರ್ಥ್ಯವಾದ 35.00 ಮೆ.ವ್ಯಾ. ಯೋಜನೆಯಿದ್ದು, ಇದರಲ್ಲಿ 32.00 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು **128.00 ಮೆ.ವ್ಯಾ**ಗೆ ಕೆಲವೊಂದು ಷರತ್ತಿಗೊಳಪಟ್ಟು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹೆಚ್ಚಿಸಿ ಅದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ಫಾರ್ಚುನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ಬಿಜಾಪುರ ಜಿಲ್ಲೆಯ ಇಂಗಳೇಶ್ವರ, ರಾಬಿನಹಾಳ್, ರಾಮನಹಟ್ಟಿ, ಹಂಚಿನಾಳ್, ಸಾಲವಡಗಿ, ಬೂದಿಹಾಳ್ ಗ್ರಾಮಗಳಲ್ಲಿ ಮಂಜೂರಾಗಿರುವ 128.00 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಕಾಶವನ್ನು ದಿನಾಂಕ 01.08.2012 ರಿಂದ ದಿನಾಂಕ 31.07.2015 ರವರೆಗೆ ವಿಸ್ತರಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರು ಮೆ:: ಫಾರ್ಚುನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ಬಿಜಾಪುರ ಜಿಲ್ಲೆಯ ವಿವಿಧ ಪ್ರದೇಶಗಳಲ್ಲಿ ಹಂಚಿಕೆ

ಯಾಗಿರುವ ಒಟ್ಟು 128 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆ ಅನುಷ್ಠಾನಗೊಳಿಸುವಲ್ಲಿ ಅಭಿವೃದ್ಧಿದಾರರು ಕಾರ್ಯಪ್ರವೃತ್ತರಾಗಿರುವುದಾಗಿ ತಿಳಿಸುತ್ತಾ, ಸದರಿ ಸಾಮರ್ಥ್ಯದಲ್ಲಿ ಬಿಜಾಪುರ ಜಿಲ್ಲೆಯ ಇಂಗಳೇಶ್ವರ, ರಾಬಿನಹಾಳ್, ರಾಮನಹಟ್ಟಿ, ಹಂಚಿನಾಳ್, ಸಾಲವಡಗಿ, ಬೂದಿಹಾಳ್ ಗ್ರಾಮಗಳಲ್ಲಿ ಮಂಜೂರಾಗಿರುವ 15 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ: ಮ್ಯಾಟ್ರಿಕ್ಸ್ ಪವರ್ (ವಿಂಡ್) ಪ್ರೈವೇಟ್ ಲಿಮಿಟೆಡ್ ರವರಿಗೆ ವರ್ಗಾಯಿಸುವಂತೆ ಹಾಗೂ ಅಭಿವೃದ್ಧಿದಾರರು ವರ್ಗಾವಣೆಗೆ ಸಂಬಂಧಿಸಿದಂತೆ ವಿಸ್ತೃತ ಯೋಜನಾ ವರದಿಯನ್ನು ತಯಾರಿಸಿ ಸಲ್ಲಿಸಿದ್ದು, ಕೆ.ಆರ್.ಇ.ಡಿ.ಎಲ್.ಗೆ ನಿಗಧಿತ ವರ್ಗಾವಣೆಯ ಶುಲ್ಕವನ್ನು ಈಗಾಗಲೇ ಪಾವತಿಸಿರುವುದಾಗಿ ತಿಳಿಸಿರುತ್ತಾರೆ. ಸದರಿ ಯೋಜನೆಯಿಂದ ಉತ್ಪಾದನೆ ಆಗುವ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಮುಖಾಂತರ 3ನೇ ವ್ಯಕ್ತಿಗೆ ಮಾರಾಟಮಾಡುವ ಮತ್ತು ಯೋಜನೆಯನ್ನು ದಿನಾಂಕ 31.07.2015ರೊಳಗಾಗಿ ಅನುಷ್ಠಾನಗೊಳಿಸುವ ಷರತ್ತಿಗೊಳಪಟ್ಟು ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 218 ಎನ್‌ಸಿಇ 2013, ಬೆಂಗಳೂರು, ದಿನಾಂಕ: 13.09.2013.**

ಮೆ:: ಫಾರ್ಚುನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ಬಿಜಾಪುರ ಜಿಲ್ಲೆಯ ಇಂಗಳೇಶ್ವರ, ರಾಬಿನಹಾಳ್, ರಾಮನಹಟ್ಟಿ, ಹಂಚಿನಾಳ್, ಸಾಲವಡಗಿ, ಬೂದಿಹಾಳ್ ಗ್ರಾಮಗಳಲ್ಲಿ ಮಂಜೂರಾಗಿರುವ 128.00 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 15 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ: ಮ್ಯಾಟ್ರಿಕ್ಸ್ ಪವರ್ (ವಿಂಡ್) ಪ್ರೈವೇಟ್ ಲಿಮಿಟೆಡ್ ರವರಿಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು ವರ್ಗಾಯಿಸಿ ಆದೇಶಿಸಲಾಗಿದೆ.

| Sl.No | Village Name | Taluk/ District | MW | Land Survey number | WTG's No. | Extent of Land per WTG (Acres) | Latitude and Longitude |
|---|---|---|---|---|---|---|---|
| 1 | Ingaleshwar | Basavanabagewadi/ Bijapur | 1.50 | 733/1 | 1 | 1.03 | Lat: 16°39'1.221" N Long: 76°0'5.428'' E |
| 2 | Ingaleshwar | Basavanabagewadi/ Bijapur | 1.50 | 732 | 2 | 1.03 | Lat: 16°38'54.649" N Long: 76°0'18.591'' E |
| 3 | Ingaleshwar | Basavanabagewadi/ Bijapur | 1.50 | 724 | 3 | 3.04 | Lat: 16°38'47.024" N Long: 76°0'27.496'' E |
| 4 | Ingaleshwar | Basavanabagewadi/ Bijapur | 1.50 | 724 | 4 | 3.04 | Lat: 16°38'38.709" N Long: 76°0'24.449'' E |
| 5 | Ingaleshwar | Basavanabagewadi/ Bijapur | 1.50 | 719/1 | 5 | 1.06 | Lat: 16°38'30.726" N Long: 76°0'20.019'' E |
| 6 | Ingaleshwar | Basavanabagewadi/ Bijapur | 1.50 | 717 | 6 | 3.06 | Lat: 16°38'23.014" N Long: 76°0'13.229'' E |
| 7 | Ingaleshwar | Basavanabagewadi/ Bijapur | 1.50 | 717 | 7 | 3.06 | Lat: 16°38'15.170" N Long: 76°0'6.910'' E |
| 8 | Rabinal | Basavanabagewadi/ Bijapur | 1.50 | 87/3A | 8 | 1.20 | Lat: 16°41'13.073" N Long: 76°2'36.248'' E |
| 9 | Rabinal | Basavanabagewadi/ Bijapur | 1.50 | 92/2a, 92/2b | 9 | 1.15 | Lat: 16°41'4.883" N Long: 76°2'34.313'' E |
| 10 | Rabinal | Basavanabagewadi/ Bijapur | 1.50 | 93 | 10 | 1.16 | Lat: 16°40'56.594" N Long: 76°2'32.546'' E |
| | | **Total** | **15** | | | | |

1 **ಮೆ: ಮ್ಯಾಟ್ರಿಕ್ಸ್ ಪವರ್ (ವಿಂಡ್) ಪ್ರೈವೇಟ್ ಲಿಮಿಟೆಡ್** ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2 **ಮೆ: ಮ್ಯಾಟ್ರಿಕ್ಸ್ ಪವರ್ (ವಿಂಡ್) ಪ್ರೈವೇಟ್ ಲಿಮಿಟೆಡ್** ರವರು ಉತ್ಪಾದಿಸುವ ವಿದ್ಯುತ್ತನ್ನು ಪಿ.ಪಿ.ಎ. / ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟಮಾಡಲು ಅನುಮತಿಸಿದೆ.

3 **ಮೆ: ಮ್ಯಾಟ್ರಿಕ್ಸ್ ಪವರ್ (ವಿಂಡ್) ಪ್ರೈವೇಟ್ ಲಿಮಿಟೆಡ್** ರವರು ಯೋಜನೆಯನ್ನು ದಿನಾಂಕ 31.07.2015ರೊಳಗೆ ಅನುಷ್ಠಾನಗೊಳಿಸತಕ್ಕದ್ದು. ಯಾವುದೇ ಕಾರಣಕ್ಕು ಕಾಲಾವಧಿ ವಿಸ್ತರಿಸುವುದಿಲ್ಲ. ನಿಗಧಿತ ಅವಧಿಯೊಳಗೆ ಯೋಜನೆಯನ್ನು ಅನುಷ್ಠಾನಗೊಳಿಸದಿದ್ದಲ್ಲಿ, ನಿಯಮಾನುಸಾರ ಯೋಜನೆಯ ಹಂಚಿಕೆಯನ್ನು ರದ್ದುಗೊಳಿಸಲಾಗುವುದು ಮತ್ತು ಸೂಕ್ತ ದಂಡವಿಧಿಸಲಾಗುವುದು.

4 ಮೆ:: ಫಾರ್ಚುನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ರವರು ಯೋಜನೆಯ ಅನುಷ್ಠಾನಕ್ಕೆ ಪಡೆದಿರುವ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಹಾಗೂ ಇತರೆ ಸಂಬಂಧಿಸಿದ ಇಲಾಖೆಗಳ ಅನುಮೋದನೆಗಳು ಮೆ: ಮ್ಯಾಟ್ರಿಕ್ಸ್ ಪವರ್ (ವಿಂಡ್) ಪ್ರೈವೇಟ್ ಲಿಮಿಟೆಡ್ ರವರಿಗೂ ಅನ್ವಯಿಸುತ್ತವೆ.

5 ಸದರಿ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ.ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**PR.1174**

**SC.25**

## ಇಂಧನ ಸಚಿವಾಲಯ

**ವಿಷಯ:** ಮೆ॥ ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್.ಎಲ್.ಪಿ. ಕಂಪನಿಯವರಿಗೆ ಹಂಚಿಕೆಯಾಗಿರುವ 205.06. ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 12.00 ಮೆ.ವ್ಯಾ. ಸಾಮರ್ಥ್ಯವನ್ನು ಮೆ॥ ಲಾಲ್‌ಪುರ ವಿಂಡ್ ಎನರ್ಜಿ ಲಿಮಿಟೆಡ್ ರವರಿಗೆ ವರ್ಗಾವಣೆ ಮಾಡುವ ಕುರಿತು.

**ಓದಲಾಗಿದೆ:**

1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 42 ಎನ್‌ಸಿಇ 2006 ದಿನಾಂಕ: 20.4.2006.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 462 ಎನ್‌ಸಿಇ 2006 ದಿನಾಂಕ: 19.12.2006.
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 322 ಎನ್‌ಸಿಇ 2011 ದಿನಾಂಕ: 28.10.2011.
4) ಸರ್ಕಾರಿ ಆದೇಶ ಸಂಖ್ಯೆ: ಇಎನ್ 250 ಎನ್‌ಸಿಇ 2012 ದಿನಾಂಕ: 28.10.2012.
5) ಸರ್ಕಾರಿ ಆದೇಶ ಸಂಖ್ಯೆ: ಇಎನ್ 107 ಎನ್‌ಸಿಇ 2013 ದಿನಾಂಕ: 16.05.2013.
6) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: ಕೆಆರ್‌ಇಡಿ/08/LWEL-12 MW(VWILLP-205.6 MW)/2013/1822 ದಿನಾಂಕ: 05.08.2013 ಮತ್ತು ಕೆಆರ್‌ಇಡಿ/08/Lalpur Wind Energy-44 MW/2013/1941 ದಿನಾಂಕ: 23.08.2013.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: Logaer Machines (I) Ltd. ಕಂಪನಿಗೆ ಧಾರವಾಡ ಮತ್ತು ಹಾವೇರಿ ಜಿಲ್ಲೆಗಳಲ್ಲಿ 150.66 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: Logaer Machines (I) Ltd. ಕಂಪನಿಯ ಹೆಸರನ್ನು ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಲಿಮಿಟೆಡ್ ಎಂದು ಬದಲಾಯಿಸಲು ಹಾಗೂ ಮೆ:: Logaer Machines (I) Ltd. ರವರಿಗೆ ಹಂಚಿಕೆಯಾಗಿರುವ ಎಲ್ಲಾ ಪವನ ವಿದ್ಯುತ್ ಯೋಜನೆಗಳನ್ನು ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಲಿಮಿಟೆಡ್ ಇವರಿಗೆ ವರ್ಗಾಯಿಸಲು ಅನುಮೋದನೆ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ, ಕಂಪನಿಗೆ ಮಂಜೂರಾಗಿದ್ದ 150.66 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಅಂಶಿಕ ಸಾಮರ್ಥ್ಯವಾದ 69.63 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 200 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ, ಕಂಪನಿಗೆ ಮಂಜೂರಾಗಿದ್ದ 200 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 204 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಗಳ ಶಿಗ್ಗಾಂವ್ ಮತ್ತು ಕುಂದಗೋಳ ತಾಲ್ಲೂಕುಗಳ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 204 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 205.6 ಮೆ.ವ್ಯಾಗೆ ಹೆಚ್ಚಿಸಿ ದಿನಾಂಕ 31.3.2014ರೊಳಗೆ ಅನುಷ್ಠಾನಗೊಳಿಸುವ ಷರತ್ತಿಗೊಳಪಟ್ಟು ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ (6)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 205.6 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 12.00 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ: ಲಾಲ್‌ಪುರ ವಿಂಡ್ ಎನರ್ಜಿ ಲಿಮಿಟೆಡ್ ರವರಿಗೆ ವರ್ಗಾಯಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ ಹಾಗೂ ಮಂಜೂರಾಗಿರುವ ಒಟ್ಟು 205.6 ಮೆ.ವ್ಯಾ. ಸಾಮರ್ಥ್ಯದಲ್ಲಿ 160.00 ಮೆ.ವ್ಯಾ. ಸಾಮರ್ಥ್ಯವನ್ನು ಈಗಾಗಲೇ ವಿವಿಧ ಹೂಡಿಕೆದಾರರಿಗೆ ವರ್ಗಾಯಿಸಿ ಯೋಜನೆಯನ್ನು ಅನುಷ್ಠಾನಗೊಳಿಸಿರುವುದಾಗಿ ತಿಳಿಸಿರುತ್ತಾರೆ. ಅಲ್ಲದೆ, ಸದರಿ ಯೋಜನೆಗೆ ಅವಶ್ಯಕವಾದ ಭೂಮಿಯು ಖಾಸಗಿ ಜಮೀನಾಗಿದ್ದು, ಈ ಯೋಜನೆಯನ್ನು ದಿನಾಂಕ 31.3.2014ರೊಳಗಾಗಿ ಅನುಷ್ಠಾನಗೊಳಿಸುವ ಹಾಗೂ ಉತ್ಪಾದನೆ ಆಗುವ ವಿದ್ಯುತ್ತನ್ನು ಪಿಪಿಎ/ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟಮಾಡಲಾಗುವುದೆಂದು ತಿಳಿಸುತ್ತಾ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 213 ಎನ್‌ಸಿಇ 2013, ಬೆಂಗಳೂರು, ದಿನಾಂಕ: 16.9.2013.**

ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 205.6 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ ಅನುಷ್ಠಾನಕ್ಕೆ ಬಾಕಿ ಇರುವ 45.6 ಮೆ.ವ್ಯಾ. ಸಾಮರ್ಥ್ಯದಲ್ಲಿ **12.00 ಮೆ.ವ್ಯಾ.** ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ: ಲಾಲ್‌ಪುರ ವಿಂಡ್ ಎನರ್ಜಿ ಲಿಮಿಟೆಡ್ ರವರಿಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು **ವರ್ಗಾಯಿಸಲಾಗಿದೆ:–**

| Capacity in MW | Description of area |
|---|---|
| 80.8 MW | A large plain area spread around the villages of Timmapur, Kabnur, Ingalgi, Ramapura in Haveri and Dharwad district and it also consists of plains with higher elevations and has two main peaks. The proposed area is held by the following Geographical co-ordinates:<br>Latitude: 15°1'55'- 15°8'0'' N<br>Longitude: 75°08'56'- 75°14'23'' E<br>Ridge Peaks: 701, 714, 682, 717, 713, 698, 733, 722m Amsl |
| 124.80 MW | A very vast area encompasses high plains and small ridges spread around the villages Kongapura, Sisvinhal, Shanlipur, Huvinsigli, Sigli, Gudgeri and Ramgeri. A railway track runs into this area. This area has moderate elevations varying from 580 to 680 Mtrs and also consists of several peaks. The main places of this areas are Halgur, Gudgeri, Lakshmeshwar, Sigli, Karadgi, Nelgudda etc and the area is covered in the following Geographical co-ordinates:<br>Latitude: 15°0'0'- 15°10'30'' N<br>Longitude: 75°15'0'- 75°28'19'' E<br>Ridge Peaks: 681, 671, 676, 638, 624, 698, 664, 611, 644, 701, 720, 663, 682, 664, 708, 665, 664m Amsl |
| **205.6 MW** | |

| Sl.N | Village Name | Taluk/ District | MW | Land Survey number | WTG's No | Extent of Land per WTG (Acres) | Latitude and Longitude |
|---|---|---|---|---|---|---|---|
| 1 | Hirebendigeri | Shiggaon/ Haveri | 0.80 | 187/1 & 187/2 | 259 | 1.24 | Lat: 15°06'0.4" N<br>Long: 75°12'20.5'' E |
| 2 | Hanamanhalli | Kundagol/Dharwad | 0.80 | 9/6 | 260 | 0.24 | Lat: 15°06'4.62" N<br>Long: 75°11'46.1'' E |
| 3 | Kunkoor | Kundagol/Dharwad | 0.80 | 74 | 261 | 1.10 | Lat: 15°06'36.7" N<br>Long: 75°10'2.25'' E |
| 4 | Kunkoor | Kundagol/Dharwad | 0.80 | 122/2 | 262 | 1.10 | Lat: 15°06'51.4" N<br>Long: 75°10'1.42'' E |
| 5 | Kunkoor | Kundagol/Dharwad | 0.80 | 127 | 263 | 1.04 | Lat: 15°07'2.42" N<br>Long: 75°9'51.2'' E |
| 6 | Jigalur | Kundagol/Dharwad | 0.80 | 90/1B/2 | 264 | 1.10 | Lat: 15°7'8.98" N<br>Long: 75°9'25'' E |
| 7 | Jigalur | Kundagol/Dharwad | 0.80 | 90/1A | 265 | 1.00 | Lat: 15°7'14.6" N<br>Long: 75°9'25'' E |
| 8 | Jigalur | Kundagol/Dharwad | 0.80 | 94/2 | 266 | 1.00 | Lat: 15°7'19.7" N<br>Long: 75°9'20.9" E |
| 9 | Kunkoor | Kundagol/Dharwad | 0.80 | 130/2 | 267 | 1.10 | Lat: 15°7'16.1" N<br>Long: 75°9'56.6" E |
| 10 | Jigalur | Kundagol/Dharwad | 0.80 | 82/4 | 268 | 1.05 | Lat: 15°7'24" N<br>Long: 75°9'24'' E |
| 11 | Kunkoor | Kundagol/Dharwad | 0.80 | 134 | 269 | 1.00 | Lat: 15°7'29.6" N<br>Long: 75°9'56.7" E |
| 12 | Kunkoor | Kundagol/Dharwad | 0.80 | 157/1 | 270 | 1.10 | Lat: 15°7'36.8" N<br>Long: 75°10'10.2" E |
| 13 | Kunkoor | Kundagol/Dharwad | 0.80 | 157/4 | 271 | 01.05 | Lat: 15°7'26.6" N<br>Long: 75°10'16.8'' E |
| 14 | Kunkoor | Kundagol/Dharwad | 0.80 | 82 | 272 | 01.10 | Lat: 15°7'19.8" N<br>Long: 75°10'27.9'' E |
| 15 | Kunkoor | Kundagol/Dharwad | 0.80 | 62 | 273 | 01.00 | Lat: 15°7'13.9" N<br>Long: 75°10'54.7'' E |
| | | **Total** | **12.00** | | | | |

1 **ಮೆ:: ಲಾಲ್‌ಪುರ ವಿಂಡ್ ಎನರ್ಜಿ ಲಿಮಿಟೆಡ್** ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2 **ಮೆ:: ಲಾಲ್‌ಪುರ ವಿಂಡ್ ಎನರ್ಜಿ ಲಿಮಿಟೆಡ್** ರವರು ಉತ್ಪಾದಿಸುವ ವಿದ್ಯುತ್ತನ್ನು ಪಿಪಿಎ/ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟ ಮಾಡಲು ಅನುಮತಿಸಿದೆ.

3 ಸದರಿ ಯೋಜನೆಯನ್ನು ದಿನಾಂಕ 31.3.2014ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು. ಯಾವುದೇ ಕಾರಣಕ್ಕೂ ಕಾಲಾವಧಿ ವಿಸ್ತರಿಸುವುದಿಲ್ಲ. ನಿಗಧಿತ ಅವಧಿಯೊಳಗೆ ಯೋಜನೆ ಅನುಷ್ಠಾನಗೊಳಿಸದಿದ್ದಲ್ಲಿ, ನಿಯಮಾನುಸಾರ ಯೋಜನೆಯ ಹಂಚಿಕೆಯನ್ನು ರದ್ದುಪಡಿಸಲಾಗುವುದು ಮತ್ತು ಸೂಕ್ತ ದಂಡ ವಿಧಿಸಲಾಗುವುದು.

4 ಮೆ॥ ಲಾಲ್‌ಪುರ ವಿಂಡ್ ಎನರ್ಜಿ ಕಂಪನಿ ಲಿ. ರವರಿಗೆ ನೆಟ್‌ವರ್ತ್ ಬಗ್ಗೆ ಗ್ಯಾರಂಟಿ ನೀಡಿರುವ ಮೆ॥ ಐ.ಎಲ್. & ಎಫ್‌ಎಸ್ ಎನರ್ಜಿ ಡೆವಲಪ್‌ಮೆಂಟ್ ಕಂಪನಿಯು ಯೋಜನೆ ಅನುಷ್ಠಾನಕ್ಕೆ ಮುಂಚೆ ಗ್ಯಾರಂಟಿಯನ್ನು ಹಿಂಪಡೆದಲ್ಲಿ ಸೂಕ್ತ ದಂಡ ವಿಧಿಸಲಾಗುವುದು.

5 ಯೋಜನೆಯ ಪ್ರಗತಿ ಕುರಿತು ಅಭಿವೃದ್ಧಿದಾರರು ಪ್ರತಿ 6 ತಿಂಗಳಿಗೊಮ್ಮೆ ಕೆಆರ್‌ಇಡಿಎಲ್ ಸಂಸ್ಥೆಗೆ ಪ್ರಗತಿ ವರದಿ ಸಲ್ಲಿಸತಕ್ಕದ್ದು.

6 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ.ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**PR.1175**

**SC.25**

## ಇಂಧನ ಸಚಿವಾಲಯ

**ವಿಷಯ:** ಮೆ॥ ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್.ಎಲ್.ಪಿ. ಕಂಪನಿಯವರಿಗೆ ಹಂಚಿಕೆಯಾಗಿರುವ 205.06. ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 4.8 ಮೆ.ವ್ಯಾ. ಸಾಮರ್ಥ್ಯವನ್ನು ಮೆ॥ ಲಾಲ್‌ಪುರ ವಿಂಡ್ ಎನರ್ಜಿ ಲಿಮಿಟೆಡ್ ರವರಿಗೆ ವರ್ಗಾವಣೆ ಮಾಡುವ ಕುರಿತು.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 42 ಎನ್‌ಸಿಇ 2006 ದಿನಾಂಕ: 20.4.2006.\
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 462 ಎನ್‌ಸಿಇ 2006 ದಿನಾಂಕ: 19.12.2006.
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 322 ಎನ್‌ಸಿಇ 2011 ದಿನಾಂಕ: 28.10.2011.
4) ಸರ್ಕಾರಿ ಆದೇಶ ಸಂಖ್ಯೆ: ಇಎನ್ 250 ಎನ್‌ಸಿಇ 2012 ದಿನಾಂಕ: 28.10.2012.
5) ಸರ್ಕಾರಿ ಆದೇಶ ಸಂಖ್ಯೆ: ಇಎನ್ 107 ಎನ್‌ಸಿಇ 2013 ದಿನಾಂಕ: 16.05.2013.
6) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: ಕೆಆರ್‌ಇಡಿ/08/LWEL-4.8 MW(VWILLP-205.6 MW)/2013/1823 ದಿನಾಂಕ: 05.08.2013 ಮತ್ತು ಕೆಆರ್‌ಇಡಿ /08 /Lalpur Wind Energy-44 MW/2013/1941 ದಿನಾಂಕ: 23.08.2013.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: Logaer Machines (I) Ltd. ಕಂಪನಿಗೆ ಧಾರವಾಡ ಮತ್ತು ಹಾವೇರಿ ಜಿಲ್ಲೆಗಳಲ್ಲಿ 150.66 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: Logaer Machines (I) Ltd. ಕಂಪನಿಯ ಹೆಸರನ್ನು ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಲಿಮಿಟೆಡ್ ಎಂದು ಬದಲಾಯಿಸಲು ಹಾಗೂ ಮೆ:: Logaer Machines (I) Ltd. ರವರಿಗೆ ಹಂಚಿಕೆಯಾಗಿರುವ ಎಲ್ಲಾ ಪವನ ವಿದ್ಯುತ್ ಯೋಜನೆಗಳನ್ನು ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಲಿಮಿಟೆಡ್ ಇವರಿಗೆ ವರ್ಗಾಯಿಸಲು ಅನುಮೋದನೆ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ, ಕಂಪನಿಗೆ ಮಂಜೂರಾಗಿದ್ದ 150.66 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಅಂಶಿಕ ಸಾಮರ್ಥ್ಯವಾದ 69.63 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 200 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ, ಕಂಪನಿಗೆ ಮಂಜೂರಾಗಿದ್ದ 200 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 204 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಗಳ ಶಿಗ್ಗಾಂವ್ ಮತ್ತು ಕುಂದಗೋಳ ತಾಲ್ಲೂಕುಗಳ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 204 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 205.6 ಮೆ.ವ್ಯಾ.ಗೆ ಹೆಚ್ಚಿಸಿ ದಿನಾಂಕ 31.3.2014ರೊಳಗೆ ಅನುಷ್ಠಾನಗೊಳಿಸುವ ಷರತ್ತಿಗೊಳಪಟ್ಟು ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ (6)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 205.6 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 4.8 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ: ಲಾಲ್‌ಪುರ ವಿಂಡ್ ಎನರ್ಜಿ ಲಿಮಿಟೆಡ್ ರವರಿಗೆ

ವರ್ಗಾಯಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ ಹಾಗೂ ಮಂಜೂರಾಗಿರುವ ಒಟ್ಟು 205.6 ಮೆ.ವ್ಯಾ. ಸಾಮರ್ಥ್ಯದಲ್ಲಿ 160.00 ಮೆ.ವ್ಯಾ. ಸಾಮರ್ಥ್ಯವನ್ನು ಈಗಾಗಲೇ ವಿವಿಧ ಹೂಡಿಕೆದಾರರಿಗೆ ವರ್ಗಾಯಿಸಿ ಯೋಜನೆಯನ್ನು ಅನುಷ್ಠಾನಗೊಳಿಸಿರುವುದಾಗಿ ತಿಳಿಸಿರುತ್ತಾರೆ. ಅಲ್ಲದೆ, ಸದರಿ ಯೋಜನೆಗೆ ಅವಶ್ಯಕವಾದ ಭೂಮಿಯು ಖಾಸಗಿ ಜಮೀನಾಗಿದ್ದು, ಈ ಯೋಜನೆಯನ್ನು ದಿನಾಂಕ 31.3.2014ರೊಳಗಾಗಿ ಅನುಷ್ಠಾನಗೊಳಿಸುವ ಹಾಗೂ ಉತ್ಪಾದನೆ ಆಗುವ ವಿದ್ಯುತ್ತನ್ನು ಪಿಪಿಎ/ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟಮಾಡಲಾಗುವುದಂದು ತಿಳಿಸುತ್ತಾ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 212 ಎನ್‌ಸಿಇ 2013, ಬೆಂಗಳೂರು, ದಿನಾಂಕ: 16.9.2013.**

ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 205.6 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ ಅನುಷ್ಠಾನಕ್ಕೆ ಬಾಕಿ ಇರುವ 45.6 ಮೆ.ವ್ಯಾ. ಸಾಮರ್ಥ್ಯದಲ್ಲಿ **4.8 ಮೆ.ವ್ಯಾ.** ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ: ಲಾಲ್‌ಪುರ ವಿಂಡ್ ಎನರ್ಜಿ ಲಿಮಿಟೆಡ್ ರವರಿಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು **ವರ್ಗಾಯಿಸಲಾಗಿದೆ:–**

| Capacity in MW | Description of area |
|---|---|
| 80.80 MW | A large plain area spread around the villages of Timmapur, Kabnur, Ingalgi, Ramapura in Haveri and Dharwad district and it also consists of plains with higher elevations and has two main peaks. The proposed area is held by the following Geographical co-ordinates:<br>Latitude: 15°1'55'- 15°8'0'' N<br>Longitude: 75°08'56'- 75°14'23'' E<br>Ridge Peaks: 701, 714, 682, 717, 713, 698, 733, 722m Amsl |
| 124.80 MW | A very vast area encompasses high plains and small ridges spread around the villages Kongapura, Sisvinhal, Shanlipur, Huvinsigli, Sigli, Gudgeri and Ramgeri. A railway track runs into this area. This area has moderate elevations varying from 580 to 680 Mtrs and also consists of several peaks. The main places of this areas are Halgur, Gudgeri, Lakshmeshwar, Sigli, Karadgi, Nelgudda etc and the area is covered in the following Geographical co-ordinates:<br>Latitude: 15°0'0'- 15°10'30'' N<br>Longitude: 75°15'0'- 75°28'19'' E<br>Ridge Peaks: 681, 671, 676, 638, 624, 698, 664, 611, 644, 701, 720, 663, 682, 664, 708, 665, 664m Amsl |
| **205.6 MW** | |

| Sl.No | Village Name | Taluk/ District | MW | Land Survey number | WTG's No. | Extent of Land per WTG (Acres) | Latitude and Longitude |
|---|---|---|---|---|---|---|---|
| 1 | Kubihal | Kundagol/Dharwad | 0.80 | 144/5 & 144/2 | 229 | 1.09 | Lat: 15°07'45" N<br>Long: 75°12'12.30'' E |
| 2 | Kubihal | Kundagol/Dharwad | 0.80 | 158/2 | 230 | 1.10 | Lat: 15°07'49.9" N<br>Long: 75°12'31.6'' E |
| 3 | Kubihal | Kundagol/Dharwad | 0.80 | 152/4 | 231 | 1.10 | Lat: 15°07'48.50" N<br>Long: 75°12'00'' E |
| 4 | Kubihal | Kundagol/Dharwad | 0.80 | 160/3 | 232 | 1.10 | Lat: 15°07'52.60" N<br>Long: 75°12'19.90'' E |
| 5 | Kubihal | Kundagol/Dharwad | 0.80 | 160/3 | 233 | 1.10 | Lat: 15°07'57.10" N<br>Long: 75°11'53.70'' E |
| 6 | Kubihal | Kundagol/Dharwad | 0.80 | 184/6 | 234 | 1.10 | Lat: 15°07'59.10" N<br>Long: 75°12'8.50'' E |
| | | **Total** | **4.8** | | | | |

1 **ಮೆ:: ಲಾಲ್‌ಪುರ ವಿಂಡ್ ಎನರ್ಜಿ ಲಿಮಿಟೆಡ್** ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2 **ಮೆ:: ಲಾಲ್‌ಪುರ ವಿಂಡ್ ಎನರ್ಜಿ ಲಿಮಿಟೆಡ್** ರವರು ಉತ್ಪಾದಿಸುವ ವಿದ್ಯುತ್ತನ್ನು ಪಿಪಿಎ/ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟ ಮಾಡಲು ಅನುಮತಿಸಿದೆ.

3 ಸದರಿ ಯೋಜನೆಯನ್ನು ದಿನಾಂಕ 31.3.2014ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು. ಯಾವುದೇ ಕಾರಣಕ್ಕೂ ಕಾಲಾವಧಿ ವಿಸ್ತರಿಸುವುದಿಲ್ಲ. ನಿಗದಿತ ಅವಧಿಯೊಳಗೆ ಯೋಜನೆ ಅನುಷ್ಠಾನಗೊಳಿಸದಿದ್ದಲ್ಲಿ, ನಿಯಮಾನುಸಾರ ಯೋಜನೆಯ ಹಂಚಿಕೆಯನ್ನು ರದ್ದುಪಡಿಸಲಾಗುವುದು ಮತ್ತು ಸೂಕ್ತ ದಂಡ ವಿಧಿಸಲಾಗುವುದು.

4 ಮೆ॥ ಲಾಲ್‌ಪುರ ವಿಂಡ್ ಎನರ್ಜಿ ಕಂಪನಿ ಲಿ. ರವರಿಗೆ ನೆಟ್‌ವರ್ತ್ ಬಗ್ಗೆ ಗ್ಯಾರಂಟಿ ನೀಡಿರುವ ಮೆ॥ ಐ.ಎಲ್. & ಎಫ್‌ಎಸ್ ಎನರ್ಜಿ ಡೆವಲಪ್‌ಮೆಂಟ್ ಕಂಪನಿಯು ಯೋಜನೆ ಅನುಷ್ಠಾನಕ್ಕೆ ಮುಂಚೆ ಗ್ಯಾರಂಟಿಯನ್ನು ಹಿಂಪಡೆದಲ್ಲಿ ಸೂಕ್ತ ದಂಡ ವಿಧಿಸಲಾಗುವುದು.

| Sl. No. | Proposed capacity in MW | Nearby villages of the proposed areas | Geographical area description of the project | Additional capacity being enhanced in Stage-I | Total capacity including enhanced capacity of Stage-I |
|---|---|---|---|---|---|
| | 17.6 MW | Mallapur, Basidoni and Gorobal, Belgaum district. | A large NE-SW oriented ridge identified, as 'Q' is located on the East of Manoli town. This potential area is surrounded by Mallapur, Basidoni and Gorobal. Village The area is situated in its reserved forest and the external features are open scrub. The proposed area is covered in the following Geographical co-ordinates:<br>**Latitude**: 15°10'53"- 15°14'47" N<br>**Longitude**: 75°49'52"- 75°53'23" E<br>**Peaks**: 744, 729, 750m Amsl | 22.4 | 40 |
| 3 | 12 MW | Sirsangi, Guvankopa, Mallur, Belgaum district. | A NW-SE oriented plateau identified as 'A' is located on the SW of Rampur and is surrounded by Sirsangi, Guvankopa, Mallur. The entire plateau is open scrub and connects with Road unmetal ground. The proposed area is covered in the following Geographical co-ordinates:<br>**Latitude** 15°52'36"- 15°55'26" N<br>**Longitude**: 75°15'0"-75°16'51"E<br>**Peaks**: 743, 781m Amsl | 19.2 | 31.20 |
| | 17.6 MW | Kollur, Jalikatte, Mullur Belgaum district. | The proposed area is has two independent hill ranges, Of that, one is oriented predominantly in E-W direction and another is in the NW-SE direction and is identified as 'B'. These areas are located on the S-E of Rampur town. These areas are having rocky knobs and are having open scrub features The proposed areas are covered in the following Geographical co-ordinates:<br>**Latitude** 15°52'36"- 15°55'17" N<br>**Longitude**: 75°17'58"-75°23'42"E<br>**Peaks**: 742, 755, 742, 708, 672m Amsl | 18.4 | 36 |
| | 8 MW | Halgatti, Belgaum district. | A circular plateau located on the East of Ramdurg town and the area is identified as 'C' & is situated in the Reserved Forest. The proposed area appears to be open scrub and is covered in the following Geographical co-ordinates:<br>**Latitude** 15°56'32"- 15°57'46" N<br>**Longitude**: 75°20'55"-75°22'45"E<br>**Peaks**: 660,711m Amsl | Not subjecting for enhancement of capacity | 8 |
| | 6.4 MW | Mudenur, Belgaum district. | A NW and SE oriented large plateau is located on the North of Ramdurga town and is identified as 'D'. The proposed area is appears to be open scrub and is covered in the following Geographical co-ordinates:<br>**Latitude** 15°58'36"- 15°59'14" N<br>**Longitude**: 75°18'24"-75°19'53"E<br>**Peaks**: 689m Amsl | 2.4 | 8.8 |
| Total | | 102.4 MW | | 89.6 MW | 192 MW |

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Enercon (India) limited ರವರಿಗೆ ದಿನಾಂಕ :10.02.2006 ರ ಸರ್ಕಾರಿ ಆದೇಶದಲ್ಲಿ ಮಂಜೂರಾಗಿರುವ ಒಟ್ಟು 192 ಮೆ.ವ್ಯಾ. ಪವನ ವಿದ್ಯುತ್ ಯೋಜನೆ ಸಾಮರ್ಥ್ಯದಲ್ಲಿ ಸದರಿ ಆದೇಶದ ಕ್ರಮ ಸಂಖ್ಯೆ 1 ರಲ್ಲಿನ 38.4 ಮೆ.ವ್ಯಾ. ಸಾಮರ್ಥ್ಯ, ಕ್ರಮ ಸಂಖ್ಯೆ 2 ರಲ್ಲಿನ 6.4 ಮೆ.ವ್ಯಾ. ಸಾಮರ್ಥ್ಯ ಮತ್ತು ಕ್ರಮ ಸಂಖ್ಯೆ: 3 ರಲ್ಲಿನ 31.20+36+8+8.8 ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಪ್ರದೇಶವು (ಒಟ್ಟು 108.8 ಮೆ.ವ್ಯಾ.) ಯೋಜನೆ ಅನುಷ್ಠಾನಕ್ಕೆ ಯೋಗ್ಯವಲ್ಲದ ಕಾರಣ ಸದರಿ ಯೋಜನೆಗಳನ್ನು ಅಭಿವೃದ್ಧಿದಾರರು ಅದ್ಯರ್ಪಿಸುತ್ತಿರುವುದಾಗಿ ತಿಳಿಸಿ, ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಈ ಹಿನ್ನಲೆಯಲ್ಲಿ, ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಕಾರಣ ಕೇಳುವ ನೋಟಿಸಿನಲ್ಲಿ M/s Enercon (India) Lmited ಕಂಪನಿಗೆ ಈ 108.8 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಏಕೆ ರದ್ದುಪಡಿಸಬಾರದೆಂಬುದಕ್ಕೆ ಸಮಜಾಯಿಷಿಯನ್ನು ನೀಡುವಂತೆ ತಿಳಿಸಲಾಗಿತ್ತು. ಅಭಿವೃದ್ಧಿದಾರರು ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಪತ್ರದಲ್ಲಿ ಈ ಯೋಜನೆಗೆ ಅವಶ್ಯವಿರುವ ಜಮೀನು ಕೆ.ಐ.ಡಿ.ಬಿ.ನಿಂದ ದೊರೆಯದ ಕಾರಣ ಹಾಗೂ ಯೋಜನಾ ಪ್ರದೇಶವು eco-sensitive/historical zone ಹಾಗೂ ಜಿಂಕೆ ಉದ್ಯಾನ ವನವಾಗಿರುವುದರಿಂದ ಅರಣ್ಯ ಇಲಾಖೆಯವರು ಯೋಜನೆಗೆ

ಅನುಮತಿಯನ್ನು ನಿರಾಕರಿಸಿರುವುದರಿಂದ ಪ್ರಸ್ತಾವಿತ 108.8 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ಸಾಧ್ಯವಾಗದ ಕಾರಣ ಸರ್ಕಾರಕ್ಕೆ ಹಿಂದಿರುಗಿಸುತ್ತಿರುವುದಾಗಿ ತಿಳಿಸಿರುತ್ತಾರೆ.

ಸದರಿ ವಿಷಯವನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 158 ಎನ್‌ಸಿಇ 2013, ಬೆಂಗಳೂರು, ದಿನಾಂಕ: 06.07.2013.**

M/s Enercon (India) Lmited ರವರಿಗೆ ಬೆಳಗಾವಿ ಜಿಲ್ಲೆಯಲ್ಲಿ ಈ ಕೆಳಕಂಡ ಪ್ರದೇಶಗಳಲ್ಲಿ ಮಂಜೂರಾಗಿರುವ 108.8 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗಳನ್ನು ಹಾಗೂ ಈ ಕುರಿತು ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಬಂಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

| Sl. No. | Nearby villages of the proposed areas | Geographical area description of the project | Total capacity including enhanced capacity of Stage-I | Total capacity being surrendered |
|---|---|---|---|---|
| 1 | Murgod, Rudrapur, Rudrapur Thanda, Subapur, Belgaum district. | A large plateau situated on the East and SE of Murgod village. The plateau does not have any significant orientation. The potential area for development of wind power projects are identified as ‘A’ and ‘B’. these two areas are situated in Reserved Forest and the external features of the area as for the topomap, it is a mixture of open and dense scrub. The proposed area is covered in the following Geographical co-ordinates:<br>**Latitude**: 15°51’18”- 15°55’0” N<br>**Longitude**: 74°56’45”- 75°0’0” E<br>**Peaks**: 800, 836, 822, 859m Amsl | 38.4 | 38.4 |
| 2 | Yekkundi, Dhupdal, Belgaum district. | A NW-SE oriented ridge located on the North of Dhupdal village and is identified as Area ‘O’. The identified area is a large plateau and external features of the area are open and dense scrub. The proposed area is covered in the following Geographical co-ordinates:<br>**Latitude**: 15°0’0”- 15°0’35” N<br>**Longitude**: 75°51’13”- 75°52’42” E<br>**Peaks**: 855, 844m Amsl | 6.4 | 6.4 |
| 3 | Sirsangi, Guvankopa, Mallur, Belgaum district. | A NW-SE oriented plateau identified as ‘A’ is located on the SW of Rampur and is surrounded by Sirsangi, Guvankopa, Mallur. The entire plateau is open scrub and connects with Road unmetal ground. The proposed area is covered in the following Geographical co-ordinates:<br>**Latitude** 15°52’36”- 15°55’26” N<br>**Longitude**: 75°15’0”-75°16’51”E<br>**Peaks**: 743, 781m Amsl | 31.20 | 31.20 |
| | Kollur, Jalikatte, Mullur Belgaum district. | The proposed area is has two independent hill ranges, Of that, one is oriented predominantly in E-W direction and another is in the NW-SE direction and is identified as ‘B’. These areas are located on the S-E of Rampur town. These areas are having rocky knobs and are having open scrub features The proposed areas are covered in the following Geographical co-ordinates:<br>**Latitude** 15°52’36”- 15°55’17” N<br>**Longitude**: 75°17’58”-75°23’42”E<br>**Peaks**: 742, 755, 742, 708, 672m Amsl | 36 | 16<br>ಮಂಜೂರಾಗಿರುವ 36 ಮೆ.ವ್ಯಾ. ಸಾಮರ್ಥ್ಯದಲ್ಲಿ 16 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮಾತ್ರ ರದ್ದುಪಡಿಸಲಾಗಿದೆ |

| Sl. No. | Nearby villages of the proposed areas | Geographical area description of the project | Total capacity including enhanced capacity of Stage-I | Total capacity being surrendered |
|---|---|---|---|---|
| | Halgatti, Belgaum district. | A circular plateau located on the East of Ramdurg town and the area is identified as 'C' & is situated in the Reserved Forest. The proposed area appears to be open scrub and is covered in the following Geographical co-ordinates:<br>**Latitude** 15°56'32"- 15°57'46" N<br>**Longitude**: 75°20'55"-75°22'45"E<br>**Peaks**: 660,711m Amsl | 8 | 8 |
| | Mudenur, Belgaum district. | A NW and SE oriented large plateau is located on the North of Ramdurga town and is identified as 'D'. The proposed area is appears to be open scrub and is covered in the following Geographical co-ordinates:<br>**Latitude** 15°58'36"- 15°59'14" N<br>**Longitude**: 75°18'24"-75°19'53"E<br>**Peaks**: 689m Amsl | 8.8 | 8.8 |
| | | **Total** | | **108.8 MW** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ.ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**PR.1140**

**SC.25**

## ಇಂಧನ ಸಚಿವಾಲಯ

**ವಿಷಯ:** ಮೆ॥ ಜಿ.ಎಸ್.ಎಸ್.ಎಂ.ಆರ್. ಎನರ್ಜಿ ಪ್ರೈವೇಟ್ ಲಿಮಿಟೆಡ್, ರವರಿಗೆ ಹಂಚಿಕೆಯಾಗಿರುವ 1.3 ಮೆ.ವ್ಯಾ. ಸಾಮರ್ಥ್ಯದ ಮಚಂಗುಡಲ್ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶ ವಿಸ್ತರಿಸುವ ಕುರಿತು.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 12 ಎನ್‌ಸಿಇ 2004 ದಿನಾಂಕ: 13.02.2004.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 139 ಎನ್‌ಸಿಇ 2007 ದಿನಾಂಕ:1.06.2007
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 172 ಎನ್‌ಸಿಇ 2011 ದಿನಾಂಕ: 23.04.2011
4) ಸರ್ಕಾರಿ ಆದೇಶ ಸಂಖ್ಯೆ: ಇಎನ್ 402 ಎನ್‌ಸಿಇ 2011 ದಿನಾಂಕ: 28.02.2012
5) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/SH–124/ಮಾಚಗುಂಡಲ ಕಿಜವಿ/2013/1298 ದಿನಾಂಕ: 04.06.2013.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ॥ ಜಿ.ಎಸ್.ಎಸ್.ಎಂ.ಆರ್. ಪವರ್ ಪ್ರೈವೇಟ್ ಲಿಮಿಟೆಡ್, ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಶೋರಾಪುರ ತಾಲ್ಲೂಕಿನ ಮಾಚಲಗುಂಡಲ್ ಗ್ರಾಮದ ಬಳಿ ಶಹಪುರ ಬ್ರಾಂಚ್ ಕೆನಾಲ್‌ನ ಡಿಸ್ಟ್ರಿಬ್ಯೂಟರಿ–6 ರಲ್ಲಿ 1.3 ಮೆ.ವ್ಯಾ. ಸಾಮರ್ಥ್ಯದ ಮಾಚಲಗುಂಡಲ್ ಕಿರುಜಲ ವಿದ್ಯುತ ಯೋಜನೆಯನ್ನು ಕೆಲವೊಂದು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ಹಾಗೂ (3) ರ ಆದೇಶದಲ್ಲಿ ಮೆ॥ ಜಿ.ಎಸ್.ಎಸ್.ಎಂ.ಆರ್. ಪವರ್ ಪ್ರೈವೇಟ್ ಲಿಮಿಟೆಡ್, ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಶೋರಾಪುರ ತಾಲ್ಲೂಕಿನ ಮಾಚಲಗುಂಡಲ್ ಗ್ರಾಮದ ಬಳಿ ಶಹಪುರ ಬ್ರಾಂಚ್ ಕೆನಾಲ್‌ನ ಡಿಸ್ಟ್ರಿಬ್ಯೂಟರಿ–6 ರಲ್ಲಿ ಹಂಚಿಕೆ ಮಾಡಿದ್ದ 1.3 ಮೆ.ವ್ಯಾ. ಸಾಮರ್ಥ್ಯದ ಮಾಚಲಗುಂಡಲ್ ಕಿರುಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ಕ್ರಮವಾಗಿ ದಿನಾಂಕ :01.06.2007 ರಿಂದ ಮುಂದಿನ ₹. 3 ವರ್ಷದ ಅವಧಿಗೆ ಮತ್ತು ದಿನಾಂಕ :01.06.2010 ರಿಂದ 31.05.2011 ರವರೆಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಆದೇಶದಲ್ಲಿ ಸದರಿ ಕಂಪನಿಯ ಹೆಸರನ್ನು ಮೆ॥ ಜಿ.ಎಸ್.ಎಸ್.ಎಂ.ಆರ್. ಎನರ್ಜಿ ಪ್ರೈವೇಟ್ ಲಿಮಿಟೆಡ್, ಎಂದು ಬದಲಾಯಿಸಿ, ಯೋಜನೆಯ ಅನುಷ್ಠಾನಕ್ಕೆ ಪ್ರತಿ ಮೆ.ವ್ಯಾ.ಗೆ ₹. 3 ಲಕ್ಷಗಳ ನೆರವೇರಿಕೆ ಖಾತರಿ ಪಾವತಿಸುವ ಷರತ್ತಿಗೊಳಪಟ್ಟು ಅಂತಿಮವಾಗಿ ಕಾಲಾವಕಾಶವನ್ನು ದಿನಾಂಕ:01.06.2011 ರಿಂದ 31.05.2013 ರವರೆಗೆ ವಿಸ್ತರಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರು ಮೆ॥ ಜಿ.ಎಸ್.ಎಸ್.ಎಂ.ಆರ್. ಎನರ್ಜಿ ಪ್ರೈವೇಟ್ ಲಿಮಿಟೆಡ್, ರವರಿಗೆ ಗುಲ್ಬರ್ಗಾ ಜಿಲ್ಲೆಯ ಶೋರಾಪುರ ತಾಲ್ಲೂಕಿನ ಮಾಚಲಗುಂಡಲ್ ಗ್ರಾಮದ

ಬಳಿ ಶಹಪುರ ಬ್ರಾಂಚ್ ಕೆನಾಲ್‌ನ ಡಿಸ್ಟ್ರಿಬ್ಯೂಟರಿ–6 ರಲ್ಲಿ ಹಂಚಿಕೆ ಮಾಡಿದ್ದ 1.3 ಮೆ.ವ್ಯಾ. ಸಾಮರ್ಥ್ಯದ ಮಾಚಲಗುಂಡಲ್ ಕಿರುಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸುವಲ್ಲಿ ಅಭಿವೃದ್ಧಿದಾರರು ಕಾರ್ಯಪ್ರವೃತ್ತರಾಗಿರುವುದಾಗಿ ತಿಳಿಸಿದ್ದು, ಖಾಸಗಿ ಜಮೀನಿನ ಖರೀದಿ ಹಾಗೂ ಕರ್ನಾಟಕ ಭಾಗ್ಯಜಲ ನಿಗಮದ ಅನುಮತಿ ವಿಳಂಬದಿಂದಾಗಿ ಯೋಜನೆಯನ್ನು ನಿಗದಿತ ಅವಧಿಯಲ್ಲಿ ಅನುಷ್ಠಾನಗೊಳಿಸಲು ಸಾಧ್ಯವಾಗಿರುವುದಿಲ್ಲವೆಂದು ಅಭಿವೃದ್ಧಿದಾರರು ತಿಳಿಸಿರುವುದರಿಂದ, ಈಗಾಗಲೇ ಕ್ರೆಡಲ್‌ಗೆ ಪಾವತಿಸಿರುವ ₹. 3.90 ಲಕ್ಷಗಳ ಬ್ಯಾಂಕ್ ಗ್ಯಾರಂಟಿಯನ್ನು ದಿನಾಂಕ :31.05.2015 ರವರೆಗೆ ವಿಸ್ತರಿಸಿ, ಯೋಜನೆಯ ಅನುಷ್ಠಾನಕ್ಕೆ ದಿನಾಂಕ :31.05.2015 ರವರೆಗೆ ಕಾಲಾವಕಾಶ ವಿಸ್ತರಿಸಬಹುದೆಂಬ ಶಿಫಾರಸ್ಸಿನೊಂದಿಗೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 167 ಎನ್‌ಸಿಇ 2013, ಬೆಂಗಳೂರು, ದಿನಾಂಕ: 09.07.2013.**

ಮೆ॥ ಜಿ.ಎಸ್.ಎಸ್.ಎಂ.ಆರ್. ಎನರ್ಜಿ ಪ್ರೈವೇಟ್ ಲಿಮಿಟೆಡ್, ಕಂಪನಿಗೆ ಗುಲ್ಬರ್ಗಾ (ಇಂದಿನ ಯಾದಗಿರಿ ಜಿಲ್ಲೆ) ಜಿಲ್ಲೆಯ ಶೋರಾಪುರ ತಾಲ್ಲೂಕಿನ ಮಾಚಲಗುಂಡಲ್ ಗ್ರಾಮದ ಬಳಿ ಶಹಪುರ ಬ್ರಾಂಚ್ ಕೆನಾಲ್‌ನ ಡಿಸ್ಟ್ರಿಬ್ಯೂಟರಿ–6 ರಲ್ಲಿ 1.3 ಮೆ.ವ್ಯಾ. ಸಾಮರ್ಥ್ಯದ ಮಾಚಲಗುಂಡಲ್ ಕಿರುಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಅಂತಿಮವಾಗಿ ದಿನಾಂಕ :01.06.2013 ರಿಂದ 2 ವರ್ಷಗಳ ಕಾಲಾವಧಿಯನ್ನು ಕೆಳಕಂಡ ಷರತ್ತಿಗೊಳಪಟ್ಟು ವಿಸ್ತರಿಸಿ ಆದೇಶಿಸಿದೆ.

1. ಸದರಿ ಯೋಜನೆಯ ಅನುಷ್ಠಾನಕ್ಕೆ ಇನ್ನು ಮುಂದೆ ಯಾವುದೇ ಕಾರಣಕ್ಕೂ ಅವಧಿಯನ್ನು ವಿಸ್ತರಿಸಲಾಗುವುದಿಲ್ಲ.
2. ಅಭಿವೃದ್ಧಿದಾರರು ಈಗಾಗಲೇ ಪಾವತಿಸಿರುವ ₹. 3.9 ಲಕ್ಷಗಳ ನೆರವೇರಿಕೆ ಖಾತರಿ ಮೊತ್ತವನ್ನು ದಿನಾಂಕ :31.05.2015 ರವರೆಗೆ ಮುಂದುವರೆಸಿದೆ.
3. ಅಭಿವೃದ್ಧಿದಾರರು ನಿಯಮಾನುಸಾರ ಕಾಲಾವಧಿ ವಿಸ್ತರಣಾ ಶುಲ್ಕವನ್ನು ಕೆ.ಆರ್.ಇ.ಡಿ.ಎಲ್.ಗೆ ಪಾವತಿಸತಕ್ಕದ್ದು,
4. ಈ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ.ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**PR.1141**
**SC.50**

**ಇಂಧನ ಸಚಿವಾಲಯ**

**ವಿಷಯ:** ಮೆ:: ದಾಲ್ಮಿಯಾ ಸಿಮೆಂಟ್ (ಭಾರತ್) ಲಿಮಿಟೆಡ್ ರವರ 4 MTPA ಸಿಮೆಂಟ್ ಸ್ಥಾವರದೊಂದಿಗೆ 45 ಮೆ.ವ್ಯಾ. ಸಾಮರ್ಥ್ಯದ ಸಹ–ವಿದ್ಯುತ್ ಯೋಜನಾ ಘಟಕವನ್ನು ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡುವ ಬಗ್ಗೆ.

**ಓದಲಾಗಿದೆ:** 1 ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ಆದೇಶ ಸಂಖ್ಯೆ :ಸಿಐ 75 ಎಸ್‌ಪಿಐ 2008 ದಿನಾಂಕ 02.05.2008.

2 ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ ಇಡಿ/04/F-21/2012-13/2079 ದಿನಾಂಕ: 10.09.2013.

**ಪ್ರಸ್ತಾವನೆ: –**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ:: ದಾಲ್ಮಿಯಾ ಸಿಮೆಂಟ್ (ಭಾರತ್) ಲಿಮಿಟೆಡ್ ಇವರಿಗೆ ಬೆಳಗಾವಿ ಜಿಲ್ಲೆಯ, ಗೋಕಾಕ್ ತಾಲ್ಲೂಕಿನ, ಯಾದವಾಡ ಗ್ರಾಮದಲ್ಲಿ 4 MTPA ಸಾಮರ್ಥ್ಯದ ಸಿಮೆಂಟ್ ಸ್ಥಾವರವನ್ನು ಹಾಗೂ 45 ಮೆ.ವ್ಯಾ. ಸಾಮರ್ಥ್ಯದ ಶಾಖೋತ್ಪನ್ನ ಸಹ–ವಿದ್ಯುತ್ ಘಟಕ ಸ್ಥಾಪಿಸಲು ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯು ಅನುಮೋದನೆ ನೀಡಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ದಾಲ್ಮಿಯಾ ಸಿಮೆಂಟ್ (ಭಾರತ್) ಲಿಮಿಟೆಡ್ ರವರಿಗೆ ಬೆಳಗಾವಿ ಜಿಲ್ಲೆಯ, ಗೋಕಾಕ್ ತಾಲ್ಲೂಕಿನ, ಯಾದವಾಡ ಗ್ರಾಮದಲ್ಲಿ 4 MTPA ಸಾಮರ್ಥ್ಯದ ಸಿಮೆಂಟ್ ಸ್ಥಾವರದೊಂದಿಗೆ 45 ಮೆ.ವ್ಯಾ. ಸಾಮರ್ಥ್ಯದ ಶಾಖೋತ್ಪನ್ನ ಸಹ–ವಿದ್ಯುತ್ ಘಟಕ ಸ್ಥಾಪಿಸಲು ಸದರಿ ಘಟಕದಿಂದ ಉತ್ಪಾದನೆಯಾಗುವ ವಿದ್ಯುತ್‌ನ್ನು ವಿದ್ಯುತ್ ಜಾಲಕ್ಕೆ ಜೋಡಿಸಲು ಕೆ.ಪಿ.ಟಿ.ಸಿ.ಎಲ್.ನ ಅನುಮೋದನೆ ಪಡೆಯಲು ನಿರಾಕ್ಷೇಪಣಾ ಪತ್ರವನ್ನು ನೀಡುವ ಕುರಿತು ಪರಿಗಣಿಸಬಹುದೆಂದು ತಿಳಿಸುತ್ತಾ, ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 224 ಎನ್‌ಸಿಇ 2013 ಬೆಂಗಳೂರು, ದಿನಾಂಕ: 24.09.2013.**

ಮೆ:: ದಾಲ್ಮಿಯಾ ಸಿಮೆಂಟ್ (ಭಾರತ್) ಲಿಮಿಟೆಡ್ ಇವರಿಗೆ ಬೆಳಗಾವಿ ಜಿಲ್ಲೆಯ, ಗೋಕಾಕ್ ತಾಲ್ಲೂಕಿನ, ಯಾದವಾಡ ಗ್ರಾಮದಲ್ಲಿ 4 MTPA ಸಾಮರ್ಥ್ಯದ ಸಿಮೆಂಟ್ ಸ್ಥಾವರದೊಂದಿಗೆ 45 ಮೆ.ವ್ಯಾ. ಸಾಮರ್ಥ್ಯದ ಶಾಖೋತ್ಪನ್ನ ಸಹ–ವಿದ್ಯುತ್ ಘಟಕ ಸ್ಥಾಪಿಸಲು ಮತ್ತು ಈ ಪೈಕಿ ಮೊದಲನೇ ಹಂತದಲ್ಲಿ 27 ಮೆ.ವ್ಯಾ. ಸಾಮರ್ಥ್ಯದ ಶಾಖೋತ್ಪನ್ನ ವಿದ್ಯುತ್ ಉತ್ಪಾದಿಸಲು ಹಾಗೂ ಈ ಸಾಮರ್ಥ್ಯದಲ್ಲಿ 23 ಮೆ.ವ್ಯಾ. ಸಾಮರ್ಥ್ಯವನ್ನು ಎಕ್ಸ್‌ಪೋರ್ಟ್ ಮಾಡಲು ಈ ಕೆಳಗಿನ ನಿಬಂಧನೆಗಳಿಗೊಳಪಟ್ಟು ಸರ್ಕಾರದ **'ನಿರಾಕ್ಷೇಪಣೆಯನ್ನು'** ನೀಡಲಾಗಿದೆ.

1. The company shall obtain separate clearance from Karnataka Power Transmission Corporation Limited in respect of evacuation of power.

2. The company shall enter into power purchase agreement/Wheeling & Banking/ Captive use for selling of power. With Concerned escom.
3. The company shall obtain necessary statutory clearance wherever required from the respective Departments / Organizations such as Forest Department, Revenue Department, & Karnataka State Pollution Control Board, etc. for the Power plant.
4. The Detailed Project Report (D.P.R.) for the power plant shall be got approved by Karnataka Renewable Energy Development Limited, before the commencement of the power plant.

ಸದರಿ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**PR.1182**
**SC.25**

## ಇಂಧನ ಸಚಿವಾಲಯ

**ವಿಷಯ:** M/s Bidar Kissan Shakhar Karkhana Limited, Bidar ಇವರಿಗೆ 15 ಮೆ.ವ್ಯಾ. ಸಾಮರ್ಥ್ಯದ ಸಹ–ವಿದ್ಯುತ್ ಯೋಜನಾ ಘಟಕವನ್ನು ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡುವ ಬಗ್ಗೆ.

**ಓದಲಾಗಿದೆ:** 1 ಸರ್ಕಾರದ ಆದೇಶ ಸಂಖ್ಯೆ : ಸಿಐ 285 ಎಸ್‌ಜಿಎಫ್ 2004 ದಿನಾಂಕ :21.05.2007.

2 ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ /04/F-21/2012- 13 /1416 ದಿನಾಂಕ: 17/20.06.2013.

**ಪ್ರಸ್ತಾವನೆ: –**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ:: ಬೀದರ್ ಕಿಸಾನ್ ಸಕ್ಕರೆ ಕಾರ್ಖಾನೆ ಲಿಮಿಟೆಡ್ ರವರು ಬೀದರ್ ಜಿಲ್ಲೆ, ಬೀದರ್ ತಾಲ್ಲೂಕು, ಮಾಗದಾಳ್ ಗ್ರಾಮದಲ್ಲಿ 18 ಮೆ.ವ್ಯಾ. ಸಹ–ವಿದ್ಯುತ್ ಘಟಕವನ್ನೊಳಗೊಂಡ 3500 ಟಿಸಿಡಿ ಸಾಮರ್ಥ್ಯದ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯು ಅನುಮೋದನೆ ನೀಡಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ಬೀದರ್ ಕಿಸಾನ್ ಸಕ್ಕರೆ ಕಾರ್ಖಾನೆ ಲಿಮಿಟೆಡ್ ರವರು ಬೀದರ್ ಜಿಲ್ಲೆ, ಬೀದರ್ ತಾಲ್ಲೂಕು, ಮಾಗದಾಳ್ ಗ್ರಾಮದಲ್ಲಿ 15 ಮೆ.ವ್ಯಾ. (Gross) 10 ಮೆ.ವ್ಯಾ. (exportable during season) ಮತ್ತು 13 ಮೆ.ವ್ಯಾ. (exportable during off season) ಸಾಮರ್ಥ್ಯದ ಸಹ–ವಿದ್ಯುತ್ ಘಟಕವನ್ನು ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡಬಹುದಾಗಿದೆಯೆಂದು ವಿಸ್ತೃತ ಯೋಜನಾ ವರದಿಯೊಂದಿಗೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 185 ಎನ್‌ಸಿಇ 2013, ಬೆಂಗಳೂರು, ದಿನಾಂಕ: 07.08.2013.**

ಮೆ:: ಬೀದರ್ ಕಿಸಾನ್ ಶಕ್ಕರ್ ಕಾರ್ಖಾನಾ ಲಿಮಿಟೆಡ್ (M/s Bidar Kissan Shakhar Karkhana Limited) ರವರು ಬೀದರ್ ಜಿಲ್ಲೆ, ಬೀದರ್ ತಾಲ್ಲೂಕು, ಮಾಗದಾಳ್ ಗ್ರಾಮದಲ್ಲಿ 15 ಮೆ.ವ್ಯಾ. (Gross) ಹಾಗೂ 10 ಮೆ.ವ್ಯಾ. (exportable during season) ಮತ್ತು 13 ಮೆ.ವ್ಯಾ. (exportable during off season) ಸಾಮರ್ಥ್ಯದ ಸಹ–ವಿದ್ಯುತ್ ಘಟಕವನ್ನು ಸ್ಥಾಪಿಸಲು ಈ ಕೆಳಗಿನ ನಿಬಂಧನೆಗಳಿಗೊಳಪಟ್ಟು ಸರ್ಕಾರದ **'ನಿರಾಕ್ಷೇಪಣೆಯನ್ನು'** ನೀಡಲಾಗಿದೆ.

1. The company shall obtain separate clearance from Karnataka Power Transmission Corporation Limited in respect of evacuation of power.
2. The company shall enter into power purchase agreement for selling of power to Karnataka Power Transmission Corporation Limited.
3. The company shall obtain necessary statutory clearance wherever required from the respective Departments / Organizations such as Forest Department, Revenue Department, & Karnataka State Pollution Control Board, etc. for the Power plant.
4. The Detailed Project Report (D.P.R.) for the power plant shall be got approved by Karnataka Renewable Energy Development Limited, before the commencement of the power plant.

ಸದರಿ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**PR.1160**
**SC.50**

## ಇಂಧನ ಸಚಿವಾಲಯ

**ವಿಷಯ:** ಮೆ: ಗ್ರೀನ್ ಇನ್ಫ್ರಾ ವಿಂಡ್ ಸಲ್ಯೂಷನ್ಸ್ ಲಿಮಿಟೆಡ್ ರವರಿಗೆ ಮೆ :ಪ್ರಕೃತಿ ವಿಂಡ್ ಎನರ್ಜಿ ಪ್ರೈವೇಟ್ ಲಿಮಿಟೆಡ್‌ರವರಿಂದ ವರ್ಗಾಯಿಸಲ್ಪಟ್ಟ 3.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 36.00 ಮೆ.ವ್ಯಾ.ಗೆ ಹೆಚ್ಚಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 246 ಎನ್‌ಸಿಇ 2012 ದಿನಾಂಕ: 14.05.2013.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ:KRED/08/GIWSL-3.00 to 36 MW/2013/1408 ದಿನಾಂಕ: 17.06.2013. ಮತ್ತು KRED/08/GIWSL 3.00 to 36 MW/2013/1714 ದಿನಾಂಕ: 19.07.2013.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ: ಪ್ರಕೃತಿ ವಿಂಡ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ರವರಿಗೆ ಚಿತ್ರದುರ್ಗ, ದಾವಣಗೆರೆ ಮತ್ತು ಕೋಲಾರ ಜಿಲ್ಲೆಗಳಲ್ಲಿ ಹಂಚಿಕೆಯಾಗಿರುವ 20.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ ಹಂಚಿಕೆ ಆದೇಶದ ಕ್ರಮ ಸಂಖ್ಯೆ (1)ರಲ್ಲಿ ದಾವಣಗೆರೆ ಜಿಲ್ಲೆಯಲ್ಲಿ ಹಂಚಿಕೆಯಾಗಿರುವ ಅಂಶಿಕ 6.00 ಮೆ.ವ್ಯಾ. ಸಾಮರ್ಥ್ಯದ Part-A 3.00 ಮೆ.ವ್ಯಾ. ಸಾಮರ್ಥ್ಯವನ್ನು ಮೆ: ಗ್ರೀನ್ ಇನ್ಫ್ರಾ ವಿಂಡ್ ಸಲ್ಯೂಷನ್ಸ್ ಲಿಮಿಟೆಡ್ ರವರಿಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ **ವರ್ಗಾಯಿಸಿ** ಆದೇಶಿಸಲಾಗಿತ್ತು.

| Sl. No. | Transfered capacity in MW | Near by villages of the proposed area and district. | Geographical area description of the project |
|---|---|---|---|
| 1 | 3 MW<br>(5x600kW) | Madapur, Uparakeri, Harappanahalli villages in Harappanahalli Taluk, Davangere District. | **PART-A (3MW):**<br>**Latitude**: 14°47'44"- 14°49'30" N<br>**Longitude**: 75°57'54"- 75°59'48" E<br>**Ridge peaks:** 663, 702, 679m Amsl |

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಪ್ರಕೃತಿ ವಿಂಡ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ರವರಿಂದ ಮೆ: ಗ್ರೀನ್ ಇನ್ಫ್ರಾ ವಿಂಡ್ ಸಲ್ಯೂಷನ್ಸ್ ಲಿಮಿಟೆಡ್ ರವರಿಗೆ ವರ್ಗಾಯಿಸಿರುವ 3.00 ಮೆ.ವ್ಯಾ. ಸಾಮರ್ಥ್ಯವನ್ನು 36.00 ಮೆ.ವ್ಯಾ.ಗೆ ಹೆಚ್ಚಿಸಲು ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ ಹಾಗೂ ಸದರಿ ಯೋಜನೆಯು ಖಾಸಗಿ ಜಮೀನಿನಲ್ಲಿ ಬರುತ್ತಿದ್ದು, ಉತ್ಪಾದಿತ ವಿದ್ಯುತ್ತನ್ನು ಗ್ರೂಪ್ ಕ್ಯಾಪೀಟಿವ್/ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟ ಮಾಡಲಾಗುವುದೆಂದು ಮತ್ತು ಯೋಜನೆಯನ್ನು 2014–15 ರೊಳಗಾಗಿ ಅನುಷ್ಠಾನಗೊಳಿಸುವುದಾಗಿ ವರದಿ ಮಾಡಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 176 ಎನ್‌ಸಿಇ 2013, ಬೆಂಗಳೂರು, ದಿನಾಂಕ: 14.08.2013.**

ಮೆ: ಪ್ರಕೃತಿ ವಿಂಡ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ರವರಿಂದ ಮೆ: ಗ್ರೀನ್ ಇನ್ಫ್ರಾ ವಿಂಡ್ ಸಲ್ಯೂಷನ್ಸ್ ಲಿಮಿಟೆಡ್ ರವರಿಗೆ ವರ್ಗಾವಣೆಗೊಂಡಿರುವ 3.00 ಮೆ.ವ್ಯಾ. ಸಾಮರ್ಥ್ಯವನ್ನು 36 ಮೆ.ವ್ಯಾ.ಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು **ಹೆಚ್ಚಿಸಿ** ಆದೇಶಿಸಿದೆ.

| Near by villages of the propsed area and District | Geographical area description of the project | Sanctioned/ Transfer capacity in MW | Enhancement proposed in MW | Total capacity including propsed enhancement in MW |
|---|---|---|---|---|
| Madapur, Uparakeri, Harapanahalli Taluk Davangere District | **PART-A**<br>**Latitude**: 14°47'44"- 14°49'30" N<br>**Longitude**: 75°57'54"- 75°59'48" E<br>**Ridge peaks:** 663, 702, 679 Amsl. | 3.00 MW | 33 MW | 36 MW (2000 kW x 18 Nos) |

1 **ಮೆ:: ಗ್ರೀನ್ ಇನ್ಫ್ರಾ ವಿಂಡ್ ಸಲ್ಯೂಷನ್ಸ್ ಲಿಮಿಟೆಡ್** ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2 **ಮೆ:: ಗ್ರೀನ್ ಇನ್ಫ್ರಾ ವಿಂಡ್ ಸಲ್ಯೂಷನ್ಸ್ ಲಿಮಿಟೆಡ್** ರವರು ಉತ್ಪಾದಿಸುವ ವಿದ್ಯುತ್ತನ್ನು ಗ್ರೂಪ್ ಕ್ಯಾಪೀಟಿವ್/ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟಮಾಡಲು ಅನುಮತಿಸಿದೆ.

3 **ಮೆ:: ಗ್ರೀನ್ ಇನ್ಫ್ರಾ ವಿಂಡ್ ಸಲ್ಯೂಷನ್ಸ್ ಲಿಮಿಟೆಡ್** ರವರು ಬಾಕಿ ಉಳಿದಿರುವ ಶುಲ್ಕವನ್ನು ಕೆ.ಆರ್.ಇ.ಡಿ.ಎಲ್.ಗೆ ಪಾವತಿಸತಕ್ಕದ್ದು.

4 ಅಭಿವೃದ್ಧಿದಾರರು ಯೋಜನೆಯನ್ನು 2014–15 ರ ಅವಧಿಯೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು.

5 ಸದರಿ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**PR.1163**
**SC.25**

## ಇಂಧನ ಸಚಿವಾಲಯ

**ವಿಷಯ:** ಮೆ: ಗ್ರೀನ್ ಇನ್ಫ್ರಾ ವಿಂಡ್ ಟೆಕ್ನಾಲಿಜಿ ಲಿಮಿಟೆಡ್ ರವರಿಗೆ ಮೆ :ಪ್ರಕೃತಿ ವಿಂಡ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ರವರಿಂದ ವರ್ಗಾಯಿಸಲ್ಪಟ್ಟ 3.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 48.00 ಮೆ.ವ್ಯಾ.ಗೆ ಹೆಚ್ಚಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 247 ಎನ್‌ಸಿಇ 2012 ದಿನಾಂಕ: 14.05.2013.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: KRED/08/GIWSL-3.00 to 48 MW/2013/1410 ದಿನಾಂಕ: 17.06.2013. ಮತ್ತು KRED/ 08/ GIWSL 3.00 to 48 MW/ 2013/1715 ದಿನಾಂಕ: 19.07.2013.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ: ಪ್ರಕೃತಿ ವಿಂಡ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ರವರಿಗೆ ಚಿತ್ರದುರ್ಗ, ದಾವಣಗೆರೆ ಮತ್ತು ಕೋಲಾರ ಜಿಲ್ಲೆಗಳಲ್ಲಿ ಹಂಚಿಕೆಯಾಗಿರುವ 20.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ ಹಂಚಿಕೆ ಆದೇಶದ ಕ್ರಮ ಸಂಖ್ಯೆ (1) ರಲ್ಲಿ ದಾವಣಗೆರೆ ಜಿಲ್ಲೆಯಲ್ಲಿ ಹಂಚಿಕೆಯಾಗಿರುವ ಅಂಶಿಕ 6.00 ಮೆ.ವ್ಯಾ. ಸಾಮರ್ಥ್ಯದ Part-B 3.00 ಮೆ.ವ್ಯಾ. ಸಾಮರ್ಥ್ಯವನ್ನು ಮೆ: ಗ್ರೀನ್ ಇನ್ಫ್ರಾ ವಿಂಡ್ ಟೆಕ್ನಾಲಜಿ ಲಿಮಿಟೆಡ್ ರವರಿಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ **ವರ್ಗಾಯಿಸಿ** ಆದೇಶಿಸಲಾಗಿತ್ತು.

| Sl. No. | Transfered capacity in MW | Near by villages of the proposed area and district. | Geographical area description of the project |
|---|---|---|---|
| 1 | 3 MW<br>(5x600kW) | Ananthanahalli village,<br>Harapanahalli Taluk,<br>Davangere District. | **PART-B (3MW):**<br>**Latitude**: 14°45'0"- 14°46'30" N<br>**Longitude**: 75°56'33"- 76°0'0" E<br>**Ridge peaks:** 675, 682,641 & 684m Amsl |

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಪ್ರಕೃತಿ ವಿಂಡ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ರವರಿಂದ ಮೆ: ಗ್ರೀನ್ ಇನ್ಫ್ರಾ ವಿಂಡ್ ಟೆಕ್ನಾಲಜಿ ಲಿಮಿಟೆಡ್ ರವರಿಗೆ ವರ್ಗಾಯಿಸಿ ಆದೇಶಿಸಿರುವ 3.00 ಮೆ.ವ್ಯಾ. ಸಾಮರ್ಥ್ಯವನ್ನು 48.00 ಮೆ.ವ್ಯಾ.ಗೆ ಹೆಚ್ಚಿಸಲು ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ ಹಾಗೂ ಸದರಿ ಯೋಜನೆಯು ಖಾಸಗಿ ಜಮೀನಿನಲ್ಲಿ ಬರುತ್ತಿದ್ದು, ಉತ್ಪಾದಿತ ವಿದ್ಯುತ್ತನ್ನು ಗ್ರೂಪ್ ಕ್ಯಾಪೀಟಿವ್/ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟ ಮಾಡಲಾಗುವುದೆಂದು ಮತ್ತು ಯೋಜನೆಯನ್ನು 2014–15 ರೊಳಗಾಗಿ ಅನುಷ್ಠಾನಗೊಳಿಸುವುದಾಗಿ ವರದಿ ಮಾಡಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 175 ಎನ್‌ಸಿಇ 2013, ಬೆಂಗಳೂರು, ದಿನಾಂಕ: 14.08.2013.**

ಮೆ: ಪ್ರಕೃತಿ ವಿಂಡ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ರವರಿಂದ ಮೆ: ಗ್ರೀನ್ ಇನ್ಫ್ರಾ ವಿಂಡ್ ಟೆಕ್ನಾಲಜಿ ಲಿಮಿಟೆಡ್ ರವರಿಗೆ ವರ್ಗಾವಣೆಗೊಂಡಿರುವ 3.00 ಮೆ.ವ್ಯಾ. ಸಾಮರ್ಥ್ಯವನ್ನು 48.00 ಮೆ.ವ್ಯಾ.ಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳ – ಪಟ್ಟು **ಹೆಚ್ಚಿಸಿ** ಆದೇಶಿಸಿದೆ.

| Near by villages of the propsed area and District | Geographical area description of the project | Sanctioned/ Transfer capacity in MW | Enhancement proposed in MW | Total capacity including propsed enhancement in MW |
|---|---|---|---|---|
| Ananthanahalli in Harapanahalli Taluk Davangere District | **PART-B**<br>**Latitude**: 14°45'0"- 14°46'30" N<br>**Longitude**: 75°56'33"- 76°0'0" E<br>**Ridge peaks:** 675, 682,641 & 684m Amsl.<br>**Toposheet No: 48 N/13** | 3.00 MW | 45 MW | 48 MW (2000 kW x 24 Nos) |

1 **ಮೆ:: ಗ್ರೀನ್ ಇನ್ಫ್ರಾ ವಿಂಡ್ ಪವರ್ ಟೆಕ್ನಾಲಜಿ ಲಿಮಿಟೆಡ್** ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2 **ಮೆ:: ಗ್ರೀನ್ ಇನ್ಫ್ರಾ ವಿಂಡ್ ಪವರ್ ಟೆಕ್ನಾಲಜಿ ಲಿಮಿಟೆಡ್** ರವರು ಉತ್ಪಾದಿಸುವ ವಿದ್ಯುತ್ತನ್ನು ಗ್ರೂಪ್ ಕ್ಯಾಪೀಟಿವ್/ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟಮಾಡಲು ಅನುಮತಿಸಿದೆ.

3 **ಮೆ:: ಗ್ರೀನ್ ಇನ್ಫ್ರಾ ವಿಂಡ್ ಪವರ್ ಟೆಕ್ನಾಲಜಿ ಲಿಮಿಟೆಡ್** ರವರು ಬಾಕಿ ಉಳಿದಿರುವ ಶುಲ್ಕವನ್ನು ಕೆ.ಆರ್.ಇ.ಡಿ.ಎಲ್.ಗೆ ಪಾವತಿಸತಕ್ಕದ್ದು.

4 ಅಭಿವೃದ್ಧಿದಾರರು ಯೋಜನೆಯನ್ನು 2014–15 ರ ಅವಧಿಯೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು.

5 ಸದರಿ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ.ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**PR.1164**

**SC.25**

## ಇಂಧನ ಸಚಿವಾಲಯ

**ವಿಷಯ:** ಮೆ:: ಇಂಡಿಯನ್ ಕೇನ್ ಪವರ್ ಲಿಮಿಟೆಡ್ ರವರಿಗೆ ಬಾಗಲಕೋಟೆ (ಜಿ) ಮುಧೋಳ (ತಾ) ಉತ್ತುರು ಗ್ರಾಮದಲ್ಲಿ ಮಂಜೂರಾಗಿರುವ ಕಬ್ಬಿನ ಸಿಪ್ಪೆಯಾಧಾರಿತ ಸಹ–ವಿದ್ಯುತ್ ಘಟಕದ ಸಾಮರ್ಥ್ಯ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಪತ್ರ ಸಂಖ್ಯೆ ಡಿಇ 81 ಎನ್‌ಸಿಇ 2002 ದಿನಾಂಕ 01.04.2002.

2) ಸರ್ಕಾರಿ ಪತ್ರ ಸಂಖ್ಯೆ ಇಎನ್ 178 ಎನ್‌ಸಿಇ 2006 ದಿನಾಂಕ 21.04.2006.

3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/03/ICPL/F-30: 2012-13/3095 ದಿನಾಂಕ: 02/26.11.2012. ಮತ್ತು ಕೆಆರ್‌ಇಡಿಎಲ್/04/ಎಫ್–30/2013–14/1834 ದಿನಾಂಕ :06.08.2013.

**ಪ್ರಸ್ತಾವನೆ:** –

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಮೆ:: ಇಂಡಿಯನ್ ಕೇನ್ ಪವರ್ ಲಿಮಿಟೆಡ್ ಇವರಿಗೆ ಬಾಗಲಕೋಟೆ ಜಿಲ್ಲೆಯ ಮುಧೋಳ ತಾಲ್ಲೂಕಿನ ಉತ್ತುರು (ರಂಜನಗಿ) ಗ್ರಾಮದಲ್ಲಿ 15 ಮೆಗಾ ವ್ಯಾಟ್ (ಗ್ರಾಸ್) ಮತ್ತು 9 ಮೆ.ವ್ಯಾ (ಎಕ್ಸ್‌ಪೋರ್ಟೆಬಲ್) ಸಾಮರ್ಥ್ಯದ ಸಹ–ವಿದ್ಯುತ್ ಘಟಕವನ್ನು ಸ್ಥಾಪಿಸಲು ಅನುಮತಿ ನೀಡಲಾಗಿತ್ತು. ಸದರಿ ಸಹ–ವಿದ್ಯುತ್ ಘಟಕದ ಸಾಮರ್ಥ್ಯವನ್ನು 28 ಮೆ.ವ್ಯಾ. (ಗ್ರಾಸ್) 18 ಮೆ.ವ್ಯಾ. (ಎಕ್ಸ್‌ಪೋರ್ಟೆಬಲ್) ಸಾಮರ್ಥ್ಯಕ್ಕೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಹೆಚ್ಚಿಸಿ, ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ಇಂಡಿಯನ್ ಕೇನ್ ಪವರ್ ಲಿಮಿಟೆಡ್ ಇವರಿಗೆ ಬಾಗಲಕೋಟೆ ಜಿಲ್ಲೆಯ ಮುಧೋಳ ತಾಲ್ಲೂಕಿನ ಉತ್ತುರು (ರಂಜನಗಿ) ಗ್ರಾಮದಲ್ಲಿ ಮಂಜೂರಾಗಿರುವ ಸಕ್ಕರೆ ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯವನ್ನು 5000 ಟಿಸಿಡಿ ಯಿಂದ 12000 ಟಿಸಿಡಿಗೆ ಹೆಚ್ಚಿಸಿಕೊಂಡಿರುವುದಾಗಿ ತಿಳಿಸುತ್ತಾ, ಸದರಿಯವರಿಗೆ ಮಂಜೂರಾಗಿರುವ ಸಹ–ವಿದ್ಯುತ್ ಘಟಕದ 28 ಮೆ.ವ್ಯಾ. (ಗ್ರಾಸ್) ಮತ್ತು 18 ಮೆ.ವ್ಯಾ (ಎಕ್ಸ್‌ಪೋರ್ಟೆಬಲ್) ಸಾಮರ್ಥ್ಯವನ್ನು 78 ಮೆ.ವ್ಯಾ. (ಗ್ರಾಸ್) 49.015 ಮೆ.ವ್ಯಾ. (exportable during season) ಮತ್ತು 72.9 ಮೆ.ವ್ಯಾ. (exportable during off season)ಗೆ ಹೆಚ್ಚಿಸಲು ಅಗತ್ಯ ತಾಂತ್ರಿಕ ಮಾಹಿತಿಗಳನ್ನು ಒದಗಿಸಿ ಇದನ್ನು ಪರಿಶೀಲಿಸಿ, ಸಹ–ವಿದ್ಯುತ್ ಘಟಕದ ಸಾಮರ್ಥ್ಯವನ್ನು ಹೆಚ್ಚಿಸಬಹುದೆಂದು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 349 ಎನ್‌ಸಿಇ 2012, ಬೆಂಗಳೂರು, ದಿನಾಂಕ: 28.08.2013.**

ಮೆ:: ಇಂಡಿಯನ್ ಕೇನ್ ಪವರ್ ಲಿಮಿಟೆಡ್ ಇವರು ಬಾಗಲಕೋಟೆ ಜಿಲ್ಲೆಯ ಮುಧೋಳ ತಾಲ್ಲೂಕಿನ ಉತ್ತುರು (ರಂಜನಗಿ) ಗ್ರಾಮದಲ್ಲಿ ಸ್ಥಾಪಿಸಿರುವ 28 ಮೆ.ವ್ಯಾ. (ಗ್ರಾಸ್) ಮತ್ತು 18 ಮೆ.ವ್ಯಾ (ಎಕ್ಸ್‌ಪೋರ್ಟೆಬಲ್) ಸಾಮರ್ಥ್ಯದ ಸಹ–ವಿದ್ಯುತ್ ಘಟಕದ ಸಾಮರ್ಥ್ಯವನ್ನು 78 ಮೆ.ವ್ಯಾ. (ಗ್ರಾಸ್) 49.015 ಮೆ.ವ್ಯಾ. (exportable during season) ಮತ್ತು 72.9 ಮೆ.ವ್ಯಾ. (exportable during off season) ಗೆ ಹೆಚ್ಚಿಸಿ, ಈ ಕೆಳಗಿನ ನಿಬಂಧನೆಗಳಿಗೊಳಪಟ್ಟು ಸರ್ಕಾರದ **'ನಿರಾಕ್ಷೇಪಣೆಯನ್ನು'** ನೀಡಲಾಗಿದೆ.

1. The company shall obtain separate clearance from Karnataka Power Transmission Corporation Limited in respect of evacuation of power.
2. The company shall enter into power purchase agreement/ wheeling & Banking to 3rd party sale for selling of power to Karnataka Power Transmission Corporation Limited.
3. The company shall obtain necessary statutory clearance wherever required from the respective Departments / Organizations such as Forest Department, Revenue Department, & Karnataka State Pollution Control Board, etc. for the Power plant.
4. The Detailed Project Report (D.P.R.) for the power plant shall be got approved by Karnataka Renewable Energy Development Limited, before the commencement of the power plant.

ಸದರಿ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ.ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

PR.1169
SC.25

## ಇಂಧನ ಸಚಿವಾಲಯ

**ವಿಷಯ:** ಮೆ: ವಾಸ್ಗಿ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ರವರ 0.65 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಗೆ ಪಾವತಿಸಿಕೊಂಡಿರುವ ಕಾಲಾವಕಾಶ ಶುಲ್ಕ ಹಾಗೂ ನೆರವೇರಿಕೆ ಖಾತರಿ ಹಿಂದಿರುಗಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 191 ಎನ್‌ಸಿಇ 2009 ದಿನಾಂಕ: 25.11.2009.

2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 14 ಎನ್‌ಸಿಇ 2013 ದಿನಾಂಕ: 28.2.2013.

3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಎಸ್‌ಹೆಚ್ 337/ಗಾಜನೂರು ಕಿ.ಜ.ವಿ.ಯೋ./2013/1580 ದಿನಾಂಕ: –/–/2013.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ:: ವಾಸ್ಗಿ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಕಂಪನಿಗೆ ಶಿವಮೊಗ್ಗ ಜಿಲ್ಲೆಯ ಗಾಜನೂರು ಗ್ರಾಮದ ಬಳಿ ತುಂಗಾ ನದಿಯ ಗಾಜನೂರು ಡ್ಯಾಮಿನ ಎಡದಂಡೆ ಕಾಲುವೆಗೆ ಅಡ್ಡಲಾಗಿ 0.65 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಕೆಲವೊಂದು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಮೆ॥ ವಾಸ್ಗಿ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಶಿವಮೊಗ್ಗ ಜಿಲ್ಲೆಯ ಗಾಜನೂರು ಗ್ರಾಮದ ಬಳಿ ತುಂಗಾ ನದಿಯ ಗಾಜನೂರು ಡ್ಯಾಮಿನ ಎಡದಂಡೆ ಕಾಲುವೆಗೆ ಅಡ್ಡಲಾಗಿ ಹಂಚಿಕೆಯಾಗಿರುವ 0.65 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ನಿಗದಿತ ಕಾಲಾವಕಾಶ ಶುಲ್ಕದೊಂದಿಗೆ ಪ್ರತಿ ಮೆ.ವ್ಯಾ.ಗೆ ರೂ 3.00 ಲಕ್ಷಗಳ ನೇರವೇರಿಕೆ ಖಾತರಿಯನ್ನು (Performance Guarantee) ಕೆ.ಆರ್.ಇ.ಡಿ.ಎಲ್.ಗೆ ಪಾವತಿಸುವ ಷರತ್ತಿಗೊಳಪಟ್ಟು ಕಾಲಾವಧಿಯನ್ನು **ದಿನಾಂಕ 08.01.2012 ರಿಂದ 07.12.2013 ರವರೆಗೆ** ವಿಸ್ತರಿಸಿ ಆದೇಶಿಸಲಾಗಿರುತ್ತದೆ.

ಸರ್ಕಾರದ ಆದೇಶ ಸಂಖ್ಯೆ : ಎಇನ್ 14 ಎನ್‌ಸಿಇ 2013 ದಿನಾಂಕ :28.2.2013 ರನ್ವಯ ಕೆ.ಆರ್.ಇ.ಡಿ.ಎಲ್. ಸಂಸ್ಥೆಗೆ ಪಾವತಿಸಿರುವ ಕಾಲಾವಧಿ ವಿಸ್ತರಣಾ ಶುಲ್ಕ ಮತ್ತು ಬ್ಯಾಂಕ್ ನೆರವೇರಿಕೆ ಖಾತರಿ ಮೊತ್ತವನ್ನು ಹಿಂದಿರುಗಿಸುವಂತೆ ಅಭಿವೃದ್ಧಿದಾರರು ದಿನಾಂಕ :2.3.2013 ರಂದು ಸಲ್ಲಿಸಿರುವ ಮನವಿಯನ್ನು ಪರಿಶೀಲಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರು ಸರ್ಕಾರದ ನವೀಕರಿಸಬಹುದಾದ ಇಂಧನ ನೀತಿ 2009–14 ಹಾಗೂ ಸರ್ಕಾರದ ದಿನಾಂಕ:25.06.2013 ರ ಪತ್ರದನ್ವಯ ಅಭಿವೃದ್ಧಿದಾರರು ಪಾವತಿಸಿರುವ ಕಾಲಾವಕಾಶ ವಿಸ್ತರಣಾ ಶುಲ್ಕ ಹಾಗೂ ನೆರವೇರಿಕೆ ಖಾತರಿ ಶುಲ್ಕವನ್ನು ಹಿಂದಿರುಗಿಸುವ ಕುರಿತು ಸರ್ಕಾರದ ನಿರ್ದೇಶನ ಕೋರಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರದ ಹಂತದಲ್ಲಿ ಕೂಲಂಕಷವಾಗಿ ಪರಿಶೀಲಿಸಿದೆ. ಮೆ॥ ವಾಸ್ಗಿ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ರವರಿಗೆ 0.65 ಮೆ.ವ್ಯಾ. ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ದಿನಾಂಕ:25.11.2009 ರಲ್ಲಿ ಹಂಚಿಕೆ ಮಾಡಲಾಗಿರುತ್ತದೆ. ನವೀಕರಿಸಬಹುದಾದ ಇಂಧನ ನೀತಿ 2009–14 ಹಾಗೂ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ: ಇಎನ್ 07 ಎನ್‌ಸಿಇ 2011 ದಿನಾಂಕ:18.07.2011 ಮತ್ತು ಸರ್ಕಾರದ ಆದೇಶ ಸಂಖ್ಯೆ: ಇಎನ್ 129 ಎನ್‌ಸಿಇ 2011 ದಿನಾಂಕ:11.03.2011 ರನ್ವಯ ಅನುಮೋದಿಸಿರುವ ಮಾದರಿ ಒಡಂಬಡಿಕೆಯ ಕ್ರಮ ಸಂಖ್ಯೆ: 4 (ಡಿ) ರಲ್ಲಿ ಕಿರುಜಲ ವಿದ್ಯುತ್ ಯೋಜನೆಗಳ ಅನುಷ್ಠಾನಕ್ಕೆ 5 ವರ್ಷಗಳ ಕಾಲಾವಕಾಶವಿರುತ್ತದೆ. ಅದರಂತೆ, ಸದರಿ ಯೋಜನೆಯನ್ನು ಅನುಷ್ಠಾನಗೊಳಿಸಲು ಅಭಿವೃದ್ಧಿದಾರರಿಗೆ ದಿನಾಂಕ:24.11.2014 ವರೆಗೆ ಕಾಲಾವಕಾಶವಿರುವುದನ್ನು ಪರಿಗಣಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 132 ಎನ್‌ಸಿಇ 2013, ಬೆಂಗಳೂರು, ದಿನಾಂಕ: 28.09.2013.**

ಮೆ॥ ವಾಸ್ಗಿ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಶಿವಮೊಗ್ಗ ಜಿಲ್ಲೆಯ ಗಾಜನೂರು ಗ್ರಾಮದ ಬಳಿ ತುಂಗಾ ನದಿಯ ಗಾಜನೂರು ಡ್ಯಾಮಿನ ಎಡದಂಡೆ ಕಾಲುವೆಗೆ ಅಡ್ಡಲಾಗಿ ಹಂಚಿಕೆಯಾಗಿರುವ 0.65 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ನವೀಕರಿಸಬಹುದಾದ ಇಂಧನ ನೀತಿ 2009–14 ಹಾಗೂ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ: ಇಎನ್ 07 ಎನ್‌ಸಿಇ 2011 ದಿನಾಂಕ:18.07.2011 ರನ್ವಯ ಕಾಲಾವಕಾಶವನ್ನು ನಿಗದಿಪಡಿಸಲಾಗಿದೆ. ಅದರಂತೆ, ಕೆ.ಆರ್.ಇ.ಡಿ.ಎಲ್. ಸಂಸ್ಥೆಯು ಪರಿಷ್ಕೃತ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

1. ಕೆ.ಆರ್.ಇ.ಡಿ.ಎಲ್. ರವರು ಅಭಿವೃದ್ಧಿದಾರರಿಂದ ಪಾವತಿಸಿಕೊಂಡಿರುವ ಕಾಲಾವಧಿ ವಿಸ್ತರಣಾ ಶುಲ್ಕ ಹಾಗೂ ಬ್ಯಾಂಕ್ ನೆರವೇರಿಕೆ ಖಾತರಿ ಮೊತ್ತವನ್ನು ಅಭಿವೃದ್ಧಿದಾರರಿಗೆ ಹಿಂದಿರುಗಿಸತಕ್ಕದ್ದು.
2. ಈ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ.ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

PR.1185

SC.25

## ಇಂಧನ ಸಚಿವಾಲಯ

**ವಿಷಯ:** ಮೆ:: ಫಾರ್ಚ್ಯೂನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್, ಇವರಿಗೆ ಹಂಚಿಕೆಯಾಗಿರುವ 3 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 155 ಎನ್‌ಸಿಇ 2006 ದಿನಾಂಕ: 16.10.2006.
2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/SH 257/Jaladurga MHS/159 ದಿನಾಂಕ: 26.12.2011/18.01.2012.
3) ಸರ್ಕಾರದ ಕಾರಣ ಕೇಳುವ ನೋಟಿಸ್ ದಿನಾಂಕ : 09.04.2012.
4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ SH-257/Jaladurga MHS/ 2013/586 ದಿನಾಂಕ: 7.03.2013.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ:: ಫಾರ್ಚ್ಯೂನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಚಿಕ್ಕಮಗಳೂರು ಜಿಲ್ಲೆಯ ನರಸಿಂಹರಾಜಪುರ ತಾಲ್ಲೂಕಿನ ಜಲದುರ್ಗ ಗ್ರಾಮದಲ್ಲಿ ಸೀತಾ ನದಿಗೆ ಅಡ್ಡಲಾಗಿ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ (2) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ:: ಫಾರ್ಚ್ಯೂನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್, ಕಂಪನಿಯವರಿಗೆ ಚಿಕ್ಕಮಗಳೂರು ಜಿಲ್ಲೆಯ ನರಸಿಂಹರಾಜಪುರ ತಾಲ್ಲೂಕು, ಜಲದುರ್ಗ ಗ್ರಾಮದ ಬಳಿ ಸೀತಾ ನದಿಗೆ ಅಡ್ಡಲಾಗಿ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ನೀಡಿರುವ ಕಾಲಾವಕಾಶವು ದಿನಾಂಕ :24.07.2010 ಕ್ಕೆ ಮುಕ್ತಾಯಗೊಂಡಿರುತ್ತದೆ. ಸದರಿ ಅಭಿವೃದ್ಧಿದಾರರು ಯೋಜನೆಯನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ಸಾಧಿಸದ ಹಿನ್ನಲೆಯಲ್ಲಿ, ಯೋಜನೆಯ ಹಂಚಿಕೆಯನ್ನು ರದ್ದುಗೊಳಿಸಬಹುದೆಂದು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಈ ಹಿನ್ನಲೆಯಲ್ಲಿ, ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ಕಾರಣ ಕೇಳುವ ನೋಟಿಸನ್ನು ಅಭಿವೃದ್ಧಿದಾರರಿಗೆ ಜಾರಿಮಾಡಿ, ಸದರಿ ಕಿರುಜಲ ವಿದ್ಯುತ್ ಯೋಜನೆಯ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದು ಎಂಬುದಕ್ಕೆ ಸಮಜಾಯಿಷಿ ನೀಡುವಂತೆ ಕೋರಿ ರಿಜಿಸ್ಟರ್ಡ್ ಪೋಸ್ಟ್ ಮೂಲಕ ಕಳುಹಿಸಲಾಗಿತ್ತು. ಅಭಿವೃದ್ಧಿದಾರರು ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ :23.04.2012 ರ ಪತ್ರದಲ್ಲಿ ಯೋಜನೆಯನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾಗಿರುವುದಾಗಿ ತಿಳಿಸುತ್ತಾ, ಯೋಜನೆಯನ್ನು ರದ್ದುಗೊಳಿಸದಂತೆ ಕೋರಿರುತ್ತಾರೆ. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರಿಗೆ ಅಭಿವೃದ್ಧಿದಾರರು ನೀಡಿರುವ ಉತ್ತರವನ್ನು ಪರಿಶೀಲಿಸಿ ಅಭಿಪ್ರಾಯ ನೀಡುವಂತೆ ದಿನಾಂಕ :04.05.2012ರ ಪತ್ರದಲ್ಲಿ ಕೋರಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ದಿನಾಂಕ :07.03.2013 ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರಿಗೆ ಯೋಜನೆಯು ದಿನಾಂಕ :16.10.2006 ರಂದು ಹಂಚಿಕೆಯಾಗಿದ್ದು, ಯೋಜನೆಯ ಅನುಷ್ಠಾನಕ್ಕೆ ನೀಡಿದ್ದ ಕಾಲಾವಧಿಯು ದಿನಾಂಕ :24.07.2010 ಕ್ಕೆ ಮುಗಿದಿರುತ್ತದೆ. ಯೋಜನೆ ಹಂಚಿಕೆಯಾಗಿ 6 ವರ್ಷ ಕಳೆದರೂ ಕೇವಲ ಸರ್ವೇ ಕಾರ್ಯವನ್ನು ಕೈಗೊಂಡಿರುವ ಹೊರತಾಗಿ ಯಾವುದೇ ಪ್ರಗತಿಯನ್ನು ಸಾದಿಸಿರುವುದಿಲ್ಲವೆಂದು ಹಾಗೂ ಸಂಬಂಧಪಟ್ಟ ಯಾವುದೇ ಇಲಾಖೆಗಳಿಂದ ಕ್ಲಿಯರೆನ್ಸ್ ಪಡೆದಿರುವುದಿಲ್ಲವೆಂದು ತಿಳಿಸುತ್ತಾ, ಯೋಜನೆಯನ್ನು ರದ್ದು ಪಡಿಸಬಹುದೆಂದು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 46 ಎನ್‌ಸಿಇ 2012, ಬೆಂಗಳೂರು, ದಿನಾಂಕ: 03.08.2013.**

ಮೆ:: ಫಾರ್ಚ್ಯೂನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್, ಕಂಪನಿಯವರಿಗೆ ಸರ್ಕಾರಿ ಆದೇಶ ಸಂಖ್ಯೆ : ಇಎನ್ 155 ಎನ್‌ಸಿಇ 2006 ದಿನಾಂಕ :16.10.2006 ರಲ್ಲಿ ಚಿಕ್ಕಮಗಳೂರು ಜಿಲ್ಲೆಯ ನರಸಿಂಹರಾಜಪುರ ತಾಲ್ಲೂಕಿನ ಜಲದುರ್ಗ ಗ್ರಾಮದಲ್ಲಿ ಸೀತಾ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಿರುವ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಹಾಗೂ ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ.ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

PR.1153

SC.50

## ಇಂಧನ ಸಚಿವಾಲಯ

**ವಿಷಯ:** ಮೆ:: ಫಾರ್ಚ್ಯೂನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಹಂಚಿಕೆಯಾಗಿರುವ 3.25 ಮೆ.ವ್ಯಾ. ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 300 ಎನ್‌ಸಿಇ 2005 ದಿನಾಂಕ: 14.10.2005.
2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ/06/SH-223/Palloli MHS/158 ದಿನಾಂಕ :26.12.2011/18.01.2012.
3) ಸರ್ಕಾರದ ಕಾರಣ ಕೇಳುವ ನೋಟಿಸ್ ದಿನಾಂಕ : 11.04.2012
4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ/06/SH-223/Palloli MHS/2013 527 ದಿನಾಂಕ: 04.03.2013.

**ಪ್ರಸ್ತಾವನೆ :–**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಮೆ:: ಫಾರ್ಚ್ಯೂನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್, ಕಂಪನಿಯವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲ್ಲೂಕಿನ ಪೊಳಲಿ ಗ್ರಾಮ ಬಳಿ ಪೊಳಲಿ ಬ್ರಿಡ್ಜ್ ಮೇಲ್ತೊರೆಯಲ್ಲಿ ಮಂಗಳೂರು–ಮೂಡಿಗೆರೆ ಹೆದ್ದಾರಿಯಿಂದ ಸುಮಾರು 2.5 ಕಿ.ಮೀನಲ್ಲಿ 3.25 ಮೆ.ವ್ಯಾ. ಸಾಮರ್ಥ್ಯದ ವೆಂಕಟರಮಣ ಸ್ವಾಮಿ ಕಿರುಜಲ ವಿದ್ಯುತ್ ಯೋಜನೆಯನ್ನು ಕೆಲವೊಂದು ಷರತ್ತಿಗೊಳಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ (2) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ:: ಫಾರ್ಚ್ಯೂನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್, ಕಂಪನಿಯವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲ್ಲೂಕಿನ ಪೊಳಲಿ ಗ್ರಾಮ ಬಳಿ ಪೊಳಲಿ ಬ್ರಿಡ್ಜ್ ಮೇಲ್ತೊರೆಯಲ್ಲಿ ಮಂಗಳೂರು–ಮೂಡಿಗೆರೆ ಹೆದ್ದಾರಿಯಿಂದ ಸುಮಾರು 2.5 ಕಿ.ಮೀನಲ್ಲಿ 3.25 ಮೆ.ವ್ಯಾ. ಸಾಮರ್ಥ್ಯದ ವೆಂಕಟರಮಣ ಸ್ವಾಮಿ ಕಿರುಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ನೀಡಿರುವ ಕಾಲಾವಕಾಶವು ದಿನಾಂಕ :25.05.2009 ಕ್ಕೆ ಮುಕ್ತಾಯಗೊಂಡಿದ್ದು, ಸದರಿ ಅಭಿವೃದ್ಧಿದಾರರು ಯೋಜನೆಯನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ತೋರಿಲ್ಲದ ಕಾರಣ, ಯೋಜನೆಯ ಹಂಚಿಕೆಯನ್ನು ರದ್ದುಗೊಳಿಸಬಹುದೆಂದು ಶಿಫಾರಸ್ಸುಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಈ ಹಿನ್ನಲೆಯಲ್ಲಿ, ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಕಾರಣ ಕೇಳುವ ನೋಟಿಸನ್ನು ಅಭಿವೃದ್ಧಿದಾರರಿಗೆ ಜಾರಿಮಾಡಿ, ಸದರಿ ಕಿರುಜಲ ವಿದ್ಯುತ್ ಯೋಜನೆಯ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದು ಎಂಬುದಕ್ಕೆ ಸಮಜಾಯಿಷಿ ನೀಡುವಂತೆ ಕೋರಿ ರಿಜಿಸ್ಟರ್ಡ್ ಪೋಸ್ಟ್ ಮೂಲಕ ಕಳುಹಿಸಲಾಗಿತ್ತು. ಅಭಿವೃದ್ಧಿದಾರರು ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ :23.04.2012 ರ ಪತ್ರದಲ್ಲಿ ಯೋಜನೆಯನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾಗಿರುವುದಾಗಿ ತಿಳಿಸಿರುತ್ತಾರೆ. ಆದುದರಿಂದ, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರಿಗೆ ಅಭಿವೃದ್ಧಿದಾರರು ನೀಡಿರುವ ಉತ್ತರವನ್ನು ಪರಿಶೀಲಿಸಿ ಅಭಿಪ್ರಾಯ ನೀಡುವಂತೆ ದಿನಾಂಕ :4.5.2012ರ ಪತ್ರದಲ್ಲಿ ಕೋರಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ದಿನಾಂಕ :04.02.2013 ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರಿಗೆ ಯೋಜನೆಯನ್ನು 2005 ರಲ್ಲಿ ಹಂಚಿಕೆ ಮಾಡಿದ್ದು, ಅನುಷ್ಠಾನಕ್ಕೆ ನೀಡಿದ್ದ ಕಾಲಾವಧಿಯು ದಿನಾಂಕ :26.05.2009ಕ್ಕೆ ಮುಗಿದಿರುವುದಾಗಿ ಹಾಗೂ ಹಂಚಿಕೆಯಾಗಿ 7 ವರ್ಷ ಕಳೆದರೂ ಕೇವಲ ಸರ್ವೆ ಕಾರ್ಯವನ್ನು ಕೈಗೊಂಡಿರುವ ಹೊರತಾಗಿ ಯಾವುದೇ ಪ್ರಗತಿಯನ್ನು ಸಾದಿಸಿರುವುದಿಲ್ಲವೆಂದು ಹಾಗೂ ಸಂಬಂಧಪಟ್ಟ ಯಾವುದೇ ಇಲಾಖೆಗಳಿಂದ ಕ್ಲಿಯರ್‌ನ್ಸ್ ಪಡೆದಿರುವುದಿಲ್ಲವೆಂದು ತಿಳಿಸುತ್ತಾ, ಯೋಜನೆಯನ್ನು ರದ್ದು ಪಡಿಸಬಹುದೆಂದು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 48 ಎನ್‌ಸಿಇ 2012, ಬೆಂಗಳೂರು, ದಿನಾಂಕ: 05.08.2013.**

ಮೆ:: ಫಾರ್ಚ್ಯೂನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್, ಕಂಪನಿಯವರಿಗೆ ಸರ್ಕಾರಿ ಸರ್ಕಾರಿ ಆದೇಶ ಸಂಖ್ಯೆ :ಇಎನ್ 300 ಎನ್‌ಸಿಇ 2005 ದಿನಾಂಕ : 14.10.2006 ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲ್ಲೂಕಿನ ಪೊಳಲಿ ಗ್ರಾಮ ಬಳಿ ಪೊಳಲಿ ಬ್ರಿಡ್ಜ್ ಮೇಲ್ತೊರೆಯಲ್ಲಿ ಮಂಗಳೂರು–ಮೂಡಿಗೆರೆ ಹೆದ್ದಾರಿಯಿಂದ ಸುಮಾರು 2.5 ಕಿ.ಮೀನಲ್ಲಿ ಹಂಚಿಕೆ ಮಾಡಿರುವ 3.25 ಮೆ.ವ್ಯಾ. ಸಾಮರ್ಥ್ಯದ ವೆಂಕಟರಮಣ ಸ್ವಾಮಿ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಆದೇಶ ಹಾಗೂ ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**PR.1156**
**SC.50**

## ಇಂಧನ ಸಚಿವಾಲಯ

**ವಿಷಯ:** ಮೆ:: ಫಾರ್ಚ್ಯೂನ್ ಫೈವ್ ಹೈಡಲ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್, ಇವರಿಗೆ ಹಂಚಿಕೆಯಾಗಿರುವ 3.5 ಮೆ.ವ್ಯಾ. ಸಾಮರ್ಥ್ಯದ ಅಲೇಹಳ್ಳಿ ಕಿರುಜಲ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಡಿಇ 298 ಎನ್‌ಸಿಇ 2005 ದಿನಾಂಕ: 14.10.2005.
2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ/06/SH-222/ಅಲೇಹಳ್ಳಿ/ ಸರ್ಯಾ ಕಿಜವಿಯೊ/2011–12/231 ದಿನಾಂಕ :19/23.01.2012.
3) ಸರ್ಕಾರದ ಕಾರಣ ಕೇಳುವ ನೋಟಿಸ್ ದಿನಾಂಕ : 11.04.2012.
4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ./06/SH 222/Alehalli/Sarya MHS/2013/588 ದಿನಾಂಕ:07.03.2013.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ:: ಫಾರ್ಚ್ಯೂನ್ ಫೈವ್ ಹೈಡಲ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್, ಕಂಪನಿಯವರಿಗೆ ಚಿಕ್ಕಮಗಳೂರು ಜಿಲ್ಲೆಯ ನರಸಿಂಹರಾಜಪುರ ತಾಲ್ಲೂಕಿನ ಅಲೇಹಳ್ಳಿ/ಸರ್ಯಾ ಗ್ರಾಮದ ಬಳಿ ಭದ್ರಾ ನದಿಗೆ ಅಡ್ಡಲಾಗಿ 3.50 ಮೆ.ವ್ಯಾ. ಸಾಮರ್ಥ್ಯದ ಅಲೇಹಳ್ಳಿ ಕಿರುಜಲ ವಿದ್ಯುತ್ ಯೋಜನೆಯನ್ನು ಕೆಲವೊಂದು ಷರತ್ತಿಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ(2) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ:: ಫಾರ್ಚ್ಯೂನ್ ಫೈವ್ ಹೈಡಲ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್, ಕಂಪನಿಯವರಿಗೆ ಚಿಕ್ಕಮಗಳೂರು ಜಿಲ್ಲೆಯ ನರಸಿಂಹರಾಜಪುರ ತಾಲ್ಲೂಕಿನ ಅಲೇಹಳ್ಳಿ/ಸರ್ಯಾ ಗ್ರಾಮದ ಬಳಿ ಭದ್ರಾ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಿರುವ 3.50 ಮೆ.ವ್ಯಾ. ಸಾಮರ್ಥ್ಯದ ಅಲೇಹಳ್ಳಿ ಕಿರುಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ನೀಡಿರುವ ಕಾಲಾವಕಾಶವು ದಿನಾಂಕ :25.05.2009 ಕ್ಕೆ ಮುಕ್ತಾಯಗೊಂಡಿದ್ದು, ಸದರಿ ಅಭಿವೃದ್ಧಿದಾರರು ಯೋಜನೆಯನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ತೋರಿಲ್ಲದ ಕಾರಣ, ಯೋಜನೆಯ ಹಂಚಿಕೆಯನ್ನು ರದ್ದುಗೊಳಿಸಬಹುದೆಂದು ಶಿಫಾರಸ್ಸುಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಈ ಹಿನ್ನಲೆಯಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಕಾರಣ ಕೇಳುವ ನೋಟಿಸನ್ನು ಅಭಿವೃದ್ಧಿದಾರರಿಗೆ ಜಾರಿಮಾಡಿ, ಸದರಿ ಕಿರುಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶವನ್ನು ಯೋಜನೆಯನ್ನು ಅನುಷ್ಠಾನಗೊಳಿಸದಿರುವುದರಿಂದ ಏಕೆ ರದ್ದು ಪಡಿಸಬಾರದು ಎಂಬುದಕ್ಕೆ ಸಮಜಾಯಿಷಿ ನೀಡುವಂತೆ ಕೋರಿ ರಿಜಿಸ್ಟರ್ಡ್ ಪೋಸ್ಟ್ ಮೂಲಕ ಕಳುಹಿಸಲಾಗಿತ್ತು. ಅಭಿವೃದ್ಧಿದಾರರು ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ :23.04.2012 ರ ಪತ್ರದಲ್ಲಿ ಯೋಜನೆಯನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾಗಿರುವುದಾಗಿ ತಿಳಿಸಿರುತ್ತಾರೆ. ಆದುದರಿಂದ, ಕರ್ನಾಟಕ ನವೀಕರಿಸಬಹುದಾದ ಇಂಧನ

ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರಿಗೆ ಅಭಿವೃದ್ಧಿದಾರರು ನೀಡಿರುವ ಉತ್ತರವನ್ನು ಪರಿಶೀಲಿಸಿ ಅಭಿಪ್ರಾಯ ನೀಡುವಂತೆ ದಿನಾಂಕ :04.05.2012ರ ಪತ್ರದಲ್ಲಿ ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ(4) ರ ದಿನಾಂಕ : 07.03.2013 ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರಿಗೆ ಯೋಜನೆಯನ್ನು 2005 ರಲ್ಲಿ ಹಂಚಿಕೆ ಮಾಡಿದ್ದು, ಅನುಷ್ಠಾನಕ್ಕೆ ನೀಡಿದ್ದ ಕಾಲಾವಧಿಯು ದಿನಾಂಕ :26.05.2009ಕ್ಕೆ ಮುಗಿದಿರುತ್ತದೆ. ಯೋಜನೆ ಹಂಚಿಕೆಯಾಗಿ 7 ವರ್ಷ ಕಳೆದರೂ ಕೇವಲ ಸರ್ವೇ ಕಾರ್ಯವನ್ನು ಕೈಗೊಂಡಿರುವುದರ ಹೊರತಾಗಿ ಯಾವುದೇ ಪ್ರಗತಿಯನ್ನು ಸಾಧಿಸಿರುವುದಿಲ್ಲವೆಂದು ಹಾಗೂ ಸಂಬಂಧಪಟ್ಟ ಯಾವುದೇ ಇಲಾಖೆಗಳಿಂದ ಕ್ಲಿಯರ್‌ನ್ಸ್ ಪಡೆದಿರುವುದಿಲ್ಲವೆಂದು ತಿಳಿಸುತ್ತಾ, ಯೋಜನೆಯನ್ನು ರದ್ದು ಪಡಿಸಬಹುದೆಂದು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 61 ಎನ್‌ಸಿಇ 2012, ಬೆಂಗಳೂರು, ದಿನಾಂಕ: 05.08.2013.**

ಮೆ:: ಫಾರ್ಚ್ಯೂನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್, ಕಂಪನಿಯವರಿಗೆ ಸರ್ಕಾರಿ ಆದೇಶ ಸಂಖ್ಯೆ : ಇಎನ್ 298 ಎನ್‌ಸಿಇ 2005 ದಿನಾಂಕ :14.10.2006 ರಲ್ಲಿ ಚಿಕ್ಕಮಗಳೂರು ಜಿಲ್ಲೆಯ ನರಸಿಂಹರಾಜಪುರ ತಾಲ್ಲೂಕಿನ ಅಲೇಹಳ್ಳಿ/ಸರ್‍ಯಾ ಗ್ರಾಮದ ಬಳಿ ಭದ್ರ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಿರುವ 3.50 ಮೆ.ವ್ಯಾ. ಸಾಮರ್ಥ್ಯದ ಅಲೇಹಳ್ಳಿ ಕಿರುಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಹಾಗೂ ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**PR.1158**
**SC.50**

## ಇಂಧನ ಸಚಿವಾಲಯ

**ವಿಷಯ:** ಮೆ:: ಫಾರ್ಚ್ಯೂನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್, ಇವರಿಗೆ ಹಂಚಿಕೆಯಾಗಿರುವ 3.00 ಮೆ.ವ್ಯಾ. ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆ ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ : ಇಎನ್ 156 ಎನ್‌ಸಿಇ 2006 ದಿನಾಂಕ: 16.10.2006.
2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ/06/SH-259/Kuskal MHS/162 ದಿನಾಂಕ :26.12.2011/18.01.2012.
3) ಸರ್ಕಾರದ ಕಾರಣ ಕೇಳುವ ನೋಟಿಸ್ ದಿನಾಂಕ : 09.04.2012.
4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ/06/SH-259/ Kuskal MHS/2013/ 526 ದಿನಾಂಕ:04.03.2013.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ:: ಫಾರ್ಚ್ಯೂನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್, ಕಂಪನಿಯವರಿಗೆ ಚಿಕ್ಕಮಗಳೂರು ಜಿಲ್ಲೆಯ ನರಸಿಂಹರಾಜಪುರ ತಾಲ್ಲೂಕಿನ ಕುಸ್ಕಲ್ ಗ್ರಾಮದಲ್ಲಿ ಭದ್ರ ನದಿಗೆ ಅಡ್ಡಲಾಗಿ 3.00 ಮೆ.ವ್ಯಾ. ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಕೆಲವೊಂದು ಷರತ್ತಿಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ (2) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ:: ಫಾರ್ಚ್ಯೂನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್, ಕಂಪನಿಯವರಿಗೆ ಚಿಕ್ಕಮಗಳೂರು ಜಿಲ್ಲೆಯ ನರಸಿಂಹರಾಜಪುರ ತಾಲ್ಲೂಕಿನ ಕುಸ್ಕಲ್ ಗ್ರಾಮದಲ್ಲಿ ಭದ್ರ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಿರುವ 3.00 ಮೆ.ವ್ಯಾ. ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ನೀಡಿರುವ ಕಾಲಾವಕಾಶವು ದಿನಾಂಕ :28.09.2010 ಕ್ಕೆ ಮುಕ್ತಾಯಗೊಂಡಿದ್ದು, ಸದರಿ ಅಭಿವೃದ್ಧಿದಾರರು ಯೋಜನೆಯನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ತೋರಿಲ್ಲದ ಕಾರಣ, ಯೋಜನೆಯ ಹಂಚಿಕೆಯನ್ನು ರದ್ದುಗೊಳಿಸಬಹುದೆಂದು ಶಿಫಾರಸ್ಸುಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಈ ಹಿನ್ನಲೆಯಲ್ಲಿ, ಮೇಲೆ ಓದಲಾದ ಕ್ರಮ ಸಂಖ್ಯೆ(3) ರಲ್ಲಿ ಕಾರಣ ಕೇಳುವ ನೋಟಿಸನ್ನು ಅಭಿವೃದ್ದಿದಾರರಿಗೆ ಜಾರಿಮಾಡಿ, ಸದರಿ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಆದೇಶವನ್ನು ಅನುಷ್ಠಾನಗೊಳಿಸದಿರುವುದರಿಂದ ಏಕೆ ರದ್ದು ಪಡಿಸಬಾರದು ಎಂಬುದಕ್ಕೆ ಸಮಜಾಯಿಷಿ ನೀಡುವಂತೆ ಕೋರಿ ರಿಜಿಸ್ಟರ್ಡ್ ಪೋಸ್ಟ್ ಮೂಲಕ ಕಳುಹಿಸಲಾಗಿತ್ತು. ಅಭಿವೃದ್ಧಿದಾರರು ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ :23.04.2012 ರ ಪತ್ರದಲ್ಲಿ ಯೋಜನೆಯನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾಗಿರುವುದಾಗಿ ತಿಳಿಸಿರುತ್ತಾರೆ. ಆದುದರಿಂದ, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರಿಗೆ ಅಭಿವೃದ್ಧಿದಾರರು ನೀಡಿರುವ ಉತ್ತರವನ್ನು ಪರಿಶೀಲಿಸಿ ಅಭಿಪ್ರಾಯ ನೀಡುವಂತೆ ದಿನಾಂಕ :04.05.2012ರ ಪತ್ರದಲ್ಲಿ ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ(4) ರ ದಿನಾಂಕ :04.03.2013 ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರಿಗೆ ಯೋಜನೆಯು 2006 ರಲ್ಲಿ ಹಂಚಿಕೆಯಾಗಿದ್ದು, ಅನುಷ್ಠಾನಕ್ಕೆ ನೀಡಿದ್ದ ಕಾಲಾವಧಿಯು ದಿನಾಂಕ :28.09.2010 ಕ್ಕೆ ಮುಗಿದಿರುತ್ತದೆ. ಯೋಜನೆಯ ಹಂಚಿಕೆಯಾಗಿ 6 ವರ್ಷ ಕಳೆದರೂ ಕೇವಲ ಸರ್ವೇ ಕಾರ್ಯವನ್ನು

ಕೈಗೊಂಡಿರುವ ಹೊರತಾಗಿ ಯಾವುದೇ ಪ್ರಗತಿಯನ್ನು ಸಾಧಿಸಿರುವುದಿಲ್ಲವೆಂದು ಹಾಗೂ ಸಂಬಂಧಪಟ್ಟ ಯಾವುದೇ ಇಲಾಖೆಗಳಿಂದ ಕ್ಲಿಯರ್‌ನ್ಸ್ ಪಡೆದಿರುವುದಿಲ್ಲವೆಂದು ತಿಳಿಸುತ್ತಾ, ಯೋಜನೆಯನ್ನು ರದ್ದು ಪಡಿಸಬಹುದೆಂದು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 45 ಎನ್‌ಸಿಇ 2012, ಬೆಂಗಳೂರು, ದಿನಾಂಕ: 05.08.2013.**

ಮೆ:: ಫಾರ್ಚ್ಯೂನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್, ಕಂಪನಿಯವರಿಗೆ ಸರ್ಕಾರಿ ಆದೇಶ ಸಂಖ್ಯೆ :ಇಎನ್ 156 ಎನ್‌ಸಿಇ 2006 ದಿನಾಂಕ : 16.10.2006ರಲ್ಲಿ ಚಿಕ್ಕಮಗಳೂರು ಜಿಲ್ಲೆಯ ನರಸಿಂಹರಾಜಪುರ ತಾಲ್ಲೂಕಿನ ಕುಸ್ಕಲ್ ಗ್ರಾಮದಲ್ಲಿ ಭದ್ರ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಿರುವ 3.00 ಮೆ.ವ್ಯಾ. ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಹಾಗೂ ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**PR.1154**
**SC.50**

## ಇಂಧನ ಸಚಿವಾಲಯ

**ವಿಷಯ:** ಮೆ॥ ಶ್ರೀ ಮಲ್ಲೇಶ್ವರ ಪವರ್ ಜೆನ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಹಂಚಿಕೆಯಾಗಿರುವ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶ ವಿಸ್ತರಿಸುವ ಕುರಿತು.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 245 ಎನ್‌ಸಿಇ 2003 ದಿನಾಂಕ: 19.01.2004.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 196 ಎನ್‌ಸಿಇ 2008 ದಿನಾಂಕ: 17.09.2008.
3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/SH-122/Kerihole MHS/2012/101 ದಿನಾಂಕ:10.01.2013.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ಶ್ರೀ ಮಲ್ಲೇಶ್ವರ ಪವರ್ ಜೆನ್ ಪ್ರೈವೇಟ್ ಲಿಮಿಟೆಡ್‌ರವರಿಗೆ ಹಾಸನ ಜಿಲ್ಲೆಯ ಸಕಲೇಶಪುರ ತಾಲ್ಲೂಕಿನ ಕೆರಿ ಗ್ರಾಮದ ಕೆರಿಹೊಳೆಗೆ ಅಡ್ಡಲಾಗಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಕೆಲವೊಂದು ಷರತ್ತಿಗೊಳಪಟ್ಟು ಹಂಚಿಕೆ ಮಾಡಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಈ ಯೋಜನೆಯ ಅನುಷ್ಠಾನಕ್ಕೆ ಸದರಿ ಆದೇಶ ಹೊರಡಿಸಿದ ದಿನಾಂಕದಿಂದ ಮೂರು ವರ್ಷಗಳವರೆಗೆ ಕಾಲಾವಕಾಶ ವಿಸ್ತರಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ॥ ಮಲ್ಲೇಶ್ವರ ಪವರ್ ಜೆನ್ ಪ್ರೈವೇಟ್ ಲಿಮಿಟೆಡ್ ರವರಿಗೆ ಹಾಸನ ಜಿಲ್ಲೆಯ ಸಕಲೇಶಪುರ ತಾಲ್ಲೂಕಿನ ಕೆರಿ ಗ್ರಾಮದ ಕೆರಿಹೊಳೆಗೆ ಅಡ್ಡಲಾಗಿ ಹಂಚಿಕೆಯಾಗಿರುವ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆ ಅನುಷ್ಠಾನಕ್ಕೆ ನೀಡಿರುವ ಕಾಲಾವಧಿಯು ದಿನಾಂಕ 16.09.2011 ಕ್ಕೆ ಮುಕ್ತಾಯಗೊಂಡಿದ್ದು, ಈ ಯೋಜನೆಯ ಕುರಿತು ಅಭಿವೃದ್ಧಿದಾರರು ವಿಸ್ತೃತ ಯೋಜನಾ ವರದಿಯನ್ನು ತಯಾರಿಸಿದಾಗ ನೀರಿನ ಹರಿವು ಹೆಚ್ಚು ಇರುವುದು ಕಂಡುಬಂದಿದ್ದು, ಸಾಮರ್ಥ್ಯವನ್ನು 1.5 ಮೆ.ವ್ಯಾ.ನಿಂದ 3.00 ಮೆ.ವ್ಯಾ.ಗೆ ಹೆಚ್ಚಿಸುವಂತೆ ಕೋರಿರುವುದರಿಂದ ಅಭಿವೃದ್ಧಿದಾರರ ಕೋರಿಕೆಯನ್ನು ನಿಗಧಿತ ಶುಲ್ಕ ಹಾಗೂ ಪ್ರತಿ ಮೆ.ವ್ಯಾ.ಗೆ ₹. 3.00 ಲಕ್ಷಗಳ ನೆರವೇರಿಕೆ ಖಾತರಿ ವಿಧಿಸುವ ಷರತ್ತಿಗೊಳಪಟ್ಟು ಯೋಜನೆಯ ಸಾಮರ್ಥ್ಯವನ್ನು 1.5 ಮೆ.ವ್ಯಾ. ನಿಂದ 3.00 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸಲು ಹಾಗೂ ಯೋಜನೆಯ ಅನುಷ್ಠಾನಕ್ಕೆ 2 ವರ್ಷಗಳ ಕಾಲಾವಧಿ ವಿಸ್ತರಿಸಲು ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ದಿನಾಂಕ :11.3.2013 ರಂದು ನಡೆದ ಹಂಚಿಕೆ ಸಮಿತಿ ಸಭೆಯ ಮುಂದೆ ಮಂಡಿಸಲಾಗಿತ್ತು. ಸಾಮರ್ಥ್ಯ ಹೆಚ್ಚಿಸುವ ಪ್ರಸ್ತಾವನೆಯನ್ನು ಸಮಿತಿಯು ವಿವರವಾಗಿ ಚರ್ಚಿಸಿ ಕಂಪನಿಯ ನೆಟ್‌ವರ್ತ್ ಪ್ರಮಾಣ ಪತ್ರವನ್ನು ಸಲ್ಲಿಸುವಂತೆ ವ್ಯವಸ್ಥಾಪಕ ನಿರ್ದೇಶಕರು ಕ್ರೆಡಲ್ ರವರಿಗೆ ಸೂಚಿಸಿ, ಪ್ರಸ್ತಾವನೆಯನ್ನು ಮುಂದೂಡಿತ್ತು. ಸದರಿ ಯೋಜನೆಯ ಅನುಷ್ಠಾನಕ್ಕೆ ನೀಡಿರುವ ಕಾಲಾವಧಿಯು ಈಗಾಗಲೇ ಮುಕ್ತಾಯ ಗೊಂಡಿರುವುದರಿಂದ ಸರ್ಕಾರದ ಹಂತದಲ್ಲಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 47 ಎನ್‌ಸಿಇ 2013, ಬೆಂಗಳೂರು, ದಿನಾಂಕ: 07.08.2013.**

ಮೆ॥ ಶ್ರೀ ಮಲ್ಲೇಶ್ವರ ಪವರ್ ಜೆನ್ ಪ್ರೈವೇಟ್ ಲಿಮಿಟೆಡ್ ರವರಿಗೆ ಹಾಸನ ಜಿಲ್ಲೆಯ ಸಕಲೇಶಪುರ ತಾಲ್ಲೂಕಿನ ಕೆರಿ ಗ್ರಾಮದ ಕೆರಿಹೊಳೆಗೆ ಅಡ್ಡಲಾಗಿ ಹಂಚಿಕೆ ಮಾಡಿರುವ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ಕಾಲಾವಧಿಯನ್ನು ನಿಗಧಿತ ಕಾಲಾವಧಿ ಶುಲ್ಕವನ್ನು ಕ್ರೆಡಲ್‌ಗೆ ಪಾವತಿಸುವ ಷರತ್ತಿಗೊಳಪಟ್ಟು ದಿನಾಂಕ :17.09.2011 ರಿಂದ 16.09.2013 ರವರೆಗೆ ವಿಸ್ತರಿಸಿ ಆದೇಶಿಸಿದೆ.

ಈ ಆದೇಶವನ್ನು ರದ್ದು ಪಡಿಸುವ /ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**PR.1161**
**SC.25**

## ಕಂದಾಯ ಸಚಿವಾಲಯ

**ವಿಷಯ:** ಬೆಂಗಳೂರು ದಕ್ಷಿಣ ತಾಲ್ಲೂಕು ಬೇಗೂರು ಹೋಬಳಿ, ಅಗರ ಗ್ರಾಮದ ಸ.ನಂ. 9/16 ರಲ್ಲಿ 0–03 ಗುಂಟೆ ಜಮೀನನ್ನು ಶ್ರೀ ಸಂಗನಗೌಡ ಜಿ.ಪಾಟೀಲ್ ರವರಿಗೆ ಮಂಜೂರು ಮಾಡುವ ಕುರಿತು

**ಓದಲಾಗಿದೆ:**
1. ಪತ್ರ ಸಂಖ್ಯೆ: ಎಲ್ಎನ್‌ಡಿ (ಎಸ್)/ಸಿಆರ್ 248/11–12 ದಿನಾಂಕ: 05–01–2012
2. ಪತ್ರ ಸಂಖ್ಯೆ: ಎಲ್ಎನ್‌ಡಿ (ಎಸ್):ಸಿಆರ್ 248/11–12 ದಿನಾಂಕ: 17/07/2012
3. ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್ ಡಿ 514 ಎಲ್ ಜಿಬಿ 2012 ದಿನಾಂಕ: 29–08–2012
4. ಪತ್ರ ಸಂಖ್ಯೆ: ಎಲ್ಎನ್‌ಡಿ(ಎಸ್)ಸಿಆರ್248/2011–12 ದಿನಾಂಕ: 30/11/2012, 03/01/2013 ಮತ್ತು 29/10/2013

**ಪ್ರಸ್ತಾವನೆ:**

ಜಿಲ್ಲಾಧಿಕಾರಿ, ಬೆಂಗಳೂರು ಇವರು ಮೇಲೆ ಕ್ರಮಸಂಖ್ಯೆ: (1)ರಲ್ಲಿ ಓದಲಾದ ಪತ್ರದಲ್ಲಿ ಬೆಂಗಳೂರು ದಕ್ಷಿಣ ತಾಲ್ಲೂಕು, ಬೇಗೂರು ಹೋಬಳಿ, ಅಗರ ಗ್ರಾಮದ ಸ.ನಂ.9/16 ರಲ್ಲಿ 0–03 ಗುಂಟೆ ಜಮೀನು ತೂಬಿನ ಕಾಲುವೆ ಬಗ್ಗೆ ಬಿ–ಖರಾಬು ಜಮೀನಾಗಿದ್ದು, ವಸ್ತುಸ್ಥಿತಿ ಕಳೆದುಕೊಂಡಿರುವುದರಿಂದ ಶ್ರೀ ರಮಣಿಶಾಸ್ತ್ರಿ ರವರಿಗೆ ಮಂಜೂರು ಮಾಡುವ ಬಗ್ಗೆ ಪ್ರಸ್ತಾವನೆ ಸಲ್ಲಿಸಿದ್ದು, ಈ ಬಗ್ಗೆ ಸರ್ಕಾರದ ಪೂರ್ವಾನುಮೋದನೆ ಪಡೆದು ಕರ್ನಾಟಕ ಭೂಕಂದಾಯ ಕಾಯ್ದೆ ಕಲಂ 68(1)ರನ್ವಯ ಪ್ರಕಟಣೆ ಹೊರಡಿಸಲಾಗಿದ್ದು, ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲವೆಂದು ಮೇಲೆ ಕ್ರಮಸಂಖ್ಯೆ: (2)ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು ವರದಿ ಸಲ್ಲಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮಸಂಖ್ಯೆ: (3)ರಲ್ಲಿ ಸದರಿ ಜಮೀನನ್ನು ಸಾರ್ವಜನಿಕ ಹಕ್ಕಿನಿಂದ ವಿಹಿತಗೊಳಿಸಲು ಕರ್ನಾಟಕ ಭೂಕಂದಾಯ ಅಧಿನಿಯಮ 1964ರ ಕಲಂ68(5)ರಡಿ ಅಧಿಸೂಚನೆ ಹೊರಡಿಸಲಾಗಿರುತ್ತದೆ.

ಮೇಲೆ ಕ್ರಮಸಂಖ್ಯೆ: (4)ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿ, ಬೆಂಗಳೂರು ಜಿಲ್ಲೆ ರವರು ಸದರಿ ಖರಾಬು ಜಮೀನನ್ನು ಶ್ರೀ ರಮಣಿಶಾಸ್ತ್ರಿ ರವರಿಗೆ ಮಾರುಕಟ್ಟೆ ದರ ವಿಧಿಸಿ ಮಂಜೂರು ಮಾಡಲು ಪ್ರಸ್ತಾವನೆ ಸಲ್ಲಿಸಿ, ಈ ಜಮೀನಿನ ಪ್ರಸ್ತುತ ಮಾರುಕಟ್ಟೆ ದರ ಎಕರೆಯೊಂದಕ್ಕೆ ರೂ. 3.80 ಕೋಟಿಗಳಾಗಿರುತ್ತದೆ ಎಂದು ವರದಿ ಮಾಡಿರುತ್ತಾರೆ.

ಬೆಂಗಳೂರು ದಕ್ಷಿಣ ತಾಲ್ಲೂಕು, ಬೇಗೂರು ಹೋಬಳಿ, ಅಗರ ಗ್ರಾಮದ ಸ.ನಂ 9/16 ರಲ್ಲಿ 9 ಗುಂಟೆ ಜಮೀನಿಗೆ ಶ್ರೀ ಸಂಗನಗೌಡ ಜಿ. ಪಾಟೀಲ್ ಇವರು ಒಡೆತನ ಹೊಂದಿದ್ದು, ಮೆ:ಸ್ಟರ್ಲಿಂಗ್ ಡೆವಲಪರ್ಸ್ ಲಿ., ರವರೊಂದಿಗೆ ಜಮೀನಿನ ಅಭಿವೃದ್ಧಿಗಾಗಿ ಒಪ್ಪಂದ ಮಾಡಿಕೊಂಡಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 514 ಎಲ್‌ಜಿಬಿ 2012, ಬೆಂಗಳೂರು, ದಿನಾಂಕ: 23–11–2013**

ಬೆಂಗಳೂರು ದಕ್ಷಿಣ ತಾಲ್ಲೂಕು, ಬೇಗೂರು ಹೋಬಳಿ, ಅಗರ ಗ್ರಾಮದ ಸ.ನಂ.9/16 ರಲ್ಲಿ 0–03 ಗುಂಟೆ ಬಿ–ಖರಾಬು ಜಮೀನನ್ನು ಪ್ರಚಲಿತ ಮಾರುಕಟ್ಟೆ ದರ ವಿಧಿಸಿ, ನಿಯಮಾನುಸಾರ ಇತರೆ ಶುಲ್ಕಗಳನ್ನು ಪಾವತಿಸುವ ಹಾಗೂ ಈ ಕೆಳಗೆ ನಮೂದಿಸಿರುವ ನಿಬಂಧನೆಗಳಿಗೊಳಪಟ್ಟು, ಶ್ರೀ ಸಂಗನಗೌಡ ಜಿ. ಪಾಟೀಲ್ ರವರಿಗೆ ಮಂಜೂರು ಮಾಡಲಾಗಿದೆ.

**ಷರತ್ತುಗಳು:**

1. ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಸ್ಕೆಚ್ ನಂತೆ ಸರ್ವೆ ಮಾಡಿ ಹಸ್ತಾಂತರಿಸತಕ್ಕದ್ದು.
2. ಮಂಜೂರಿದಾರರು ಮೂರು ತಿಂಗಳ ಒಳಗೆ ಒಂದೇ ಕಂತಿನಲ್ಲಿ ನಿಗದಿಪಡಿಸಿರುವ ಮಾರುಕಟ್ಟೆ ದರ ಹಾಗೂ ಇತರೆ ಶುಲ್ಕಗಳನ್ನು ಪಾವತಿಸತಕ್ಕದ್ದು.
3. ಷರತ್ತುಗಳ ಉಲ್ಲಂಘನೆ ಪ್ರಕರಣಗಳಲ್ಲಿ ಮಂಜೂರಾತಿ ಆದೇಶವು ತನ್ನಷ್ಟಕ್ಕೆ ತಾನೇ ರದ್ದಾಗುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಉಮಾದೇವಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ ಮಂಜೂರಾತಿ–1)

PR.1262
SC.25

## ಇಂಧನ ಸಚಿವಾಲಯ

**ತಿದ್ದುಪಡಿ ಆದೇಶ ಸಂಖ್ಯೆ: ಇಎನ್ 240 ಎನ್‌ಸಿಇ 2013 (2) ಬೆಂಗಳೂರು, ದಿನಾಂಕ: 28.09.2013**

ಸರ್ಕಾರಿ ಆದೇಶ ಸಂಖ್ಯೆ: ಇಎನ್ 176 ಎನ್‌ಸಿಇ 2013 ದಿನಾಂಕ: 14.08.2013ರ ಆದೇಶ ಭಾಗದ ಷರತ್ತುಗಳ ಕ್ರಮ ಸಂಖ್ಯೆ: (1) ರಿಂದ (3)ರಲ್ಲಿ ಮೆ: ಗ್ರೀನ್ ಇನ್ಫ್ರಾ ವಿಂಡ್ ಪವರ್ ಸಲ್ಯೂಷನ್ಸ್ ಲಿಮಿಟೆಡ್

**ಎಂಬುದನ್ನು**

**ಮೆ: ಗ್ರೀನ್ ಇನ್ಫ್ರಾ ವಿಂಡ್ ಸಲ್ಯೂಷನ್ಸ್ ಲಿಮಿಟೆಡ್ ಎಂದು ತಿದ್ದಿ ಓದಿಕೊಳ್ಳತಕ್ಕದ್ದು.**

**ಉಳಿದಂತೆ ಸದರಿ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

PR.1186
SC.25

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ॥ ಸಿ.ಎಸ್.ನಾಗೇಶ್, ವೈದ್ಯಾಧಿಕಾರಿಗಳು(ಯು), ಇವರನ್ನು ಸ್ನಾತಕೋತ್ತರ ಪದವಿ ವ್ಯಾಸಂಗಕ್ಕಾಗಿ ನಿಯೋಜಿಸುವ ಬಗ್ಗೆ – ಆದೇಶ.

**ಓದಲಾಗಿದೆ:** ಆಯುಷ್ ನಿರ್ದೇಶಕರ ಪತ್ರ ಸಂಖ್ಯೆ: ಆಯುಷ್/31/ಸಿ(4)/2013–14 ದಿನಾಂಕ:26.10.2013.

**ಪ್ರಸ್ತಾವನೆ:**

ಆಯುಷ್ ನಿರ್ದೇಶಕರು, ಬೆಂಗಳೂರು ಇವರು ಮೇಲೆ ಓದಲಾದ ದಿನಾಂಕ: 26–10–2013ರ ಪತ್ರದಲ್ಲಿ, ಡಾ॥ ಸಿ.ಎಸ್.ನಾಗೇಶ್, ವೈದ್ಯಾಧಿಕಾರಿಗಳು(ಯು), ಶ್ರೀ ಜಯಚಾಮರಾಜೇಂದ್ರ ಭಾರತೀಯ ವೈದ್ಯಕೀಯ ಸಂಸ್ಥೆ, ಬೆಂಗಳೂರು ಇವರು "Illmul Qabalat-o-Amraz-o-Niswan" ಎಂಬ ವಿಷಯದ ತಜ್ಞತೆಯಲ್ಲಿ 2013–14ನೇ ಶೈಕ್ಷಣಿಕ ಸಾಲಿನಲ್ಲಿ ಸ್ನಾತಕೋತ್ತರ ಪದವಿ ಕೋರ್ಸ್‌ಗೆ ಕೇಂದ್ರ ಸರ್ಕಾರದಿಂದ ನಾಮನಿರ್ದೇಶನಗೊಂಡಿದ್ದು, ಸದರಿಯವರನ್ನು ರಾಷ್ಟ್ರೀಯ ಯುನಾನಿ ವೈದ್ಯಕೀಯ ಸಂಸ್ಥೆ, ಬೆಂಗಳೂರು ಇಲ್ಲಿಗೆ ಉನ್ನತ ವ್ಯಾಸಂಗಕ್ಕೆ ನಿಯೋಜಿಸುವಂತೆ ಶಿಫಾರಸ್ಸು ಮಾಡಿದ್ದಾರೆ. ಮುಂದುವರೆದು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 61ರ ಅಪೆಂಡಿಕ್ಸ್ 2 ಎ(1)ರನ್ವಯ ನಿಗಧಿಪಡಿಸಿದ ಷರತ್ತು ಮತ್ತು ನಿಬಂಧನೆಗಳನ್ನು ಪೂರೈಸಿದ್ದು, ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆಯು ಬಾಕಿ ಇರುವುದಿಲ್ಲ ಹಾಗೂ ಇವರ ಸೇವೆಯು ತೃಪ್ತಿಕರವಾಗಿದ್ದು, ಸದರಿ ವೈದ್ಯರನ್ನು 03 ವರ್ಷಗಳ ಅವಧಿಯ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 450 ಪಿಐಎಂ 2013, ಬೆಂಗಳೂರು, ದಿನಾಂಕ: 28–10–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಡಾ॥ ಸಿ.ಎಸ್.ನಾಗೇಶ್, ವೈದ್ಯಾಧಿಕಾರಿಗಳು(ಯು), ಶ್ರೀ ಜಯಚಾಮರಾಜೇಂದ್ರ ಭಾರತೀಯ ವೈದ್ಯಕೀಯ ಸಂಸ್ಥೆ, ಬೆಂಗಳೂರು, ಇವರನ್ನು ಸ್ನಾತಕೋತ್ತರ ಪದವಿ ವ್ಯಾಸಂಗಕ್ಕಾಗಿ ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: No.R12013/2/2013–E&C/(PG-U) ದಿನಾಂಕ: 15.10.2013ರಂದು ನಾಮ ನಿರ್ದೇಶನ ಮಾಡಿರುವ ಹಿನ್ನೆಲೆಯಲ್ಲಿ 2013–14ನೇ ಸಾಲಿನ ಶೈಕ್ಷಣಿಕ ವರ್ಷದಿಂದ ಜಾರಿಗೆ ಬರುವಂತೆ "Illmul Qabalat-o-Amraz-o-Niswan" ಎಂಬ ವಿಷಯದ ತಜ್ಞತೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 61ರ ಅಪೆಂಡಿಕ್ಸ್ 2 ಎ(1)ರನ್ವಯ ಸೂಚಿಸಿರುವ ಷರತ್ತುಗಳೊಂದಿಗೆ ಹಾಗೂ ಅವರ ವೇತನವನ್ನು ಸರ್ಕಾರಿ ಯುನಾನಿ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು ಇಲ್ಲಿ ಪಡೆಯುವುದರೊಂದಿಗೆ 03 ವರ್ಷಗಳ ಅವಧಿಯ ಸ್ನಾತಕೋತ್ತರ ಪದವಿ ವ್ಯಾಸಂಗಕ್ಕಾಗಿ National Institute of Unani Medicine, Bangalore ಇಲ್ಲಿಗೆ ನಿಯೋಜಿಸಲು ಸರ್ಕಾರದ ಮಂಜೂರಾತಿ ನೀಡಿದೆ.

1. ಅವರ ಹುದ್ದೆಯ ಮೇಲಿನ ಹಕ್ಕನ್ನು ಮುಂದುವರೆಸುವುದು.
2. ಅವರ ವಿದ್ಯಾಭ್ಯಾಸದ ಅವಧಿಯನ್ನು ಕೆ.ಸಿ.ಎಸ್.ಆರ್. ನಿಯಮ 8(15)(ಸಿ) ರೀತ್ಯಾ ಕೆಲಸದ ಮೇಲಿದ್ದ ಅವಧಿ ಎಂದು ಪರಿಗಣಿಸುವುದು.
3. ನಿಯೋಜನೆಯ ಅವಧಿಯಲ್ಲಿ ಅವರು ಪಡೆಯುತ್ತಿರುವ ವೇತನ ಭತ್ಯೆಗಳನ್ನು ಹಾಗೂ ಕಾಲಕಾಲಕ್ಕೆ ಲಭ್ಯವಾಗುವ ವೇತನ ಬಡ್ತಿಗಳು ಸೇರಿದಂತೆ ಯಥಾವತ್ತಾಗಿ (ಲಭ್ಯವಾಗುವಂತೆ)ಮುಂದುವರೆಸುವುದು.
4. ಕೆ.ಸಿ.ಎಸ್.ಆರ್.ನಿಯಮಾವಳಿಗಳ ನಮೂನೆ 19ರಲ್ಲಿ ಸ್ಟಾಂಪ್ ಪೇಪರ್‌ನಲ್ಲಿ ಒಪ್ಪಿಗೆ ಪತ್ರವನ್ನು ಪಡೆಯುವುದು ಹಾಗೂ ಸ್ನಾತಕೋತ್ತರ ವ್ಯಾಸಂಗ ಮುಗಿದ ನಂತರ ಇಲಾಖೆಯಲ್ಲಿ 10 ವರ್ಷಗಳ ಸೇವೆಯನ್ನು ಕಡ್ಡಾಯವಾಗಿ ಸಲ್ಲಿಸತಕ್ಕದ್ದು, ಒಪ್ಪಿಗೆ ಪತ್ರದಲ್ಲಿ ನಿಯಮಾನುಸಾರ ಎಲ್ಲಾ ಷರತ್ತುಗಳನ್ನು ನಮೂದಿಸುವುದು.
5. ವ್ಯಾಸಂಗಕ್ಕಾಗಿ ಸೇರುವ ಕೇಂದ್ರ ಸ್ಥಾನದಿಂದ ವ್ಯಾಸಂಗದ ಸ್ಥಳಕ್ಕೆ ಮೊದಲ ಬಾರಿಗೆ ಹೋಗಲು ಮತ್ತು ವ್ಯಾಸಂಗದ ಅವಧಿ ಮುಗಿದ ನಂತರ ವಾಪಸ್ಸು ಬರಲು ಪ್ರವಾಸದ ಮೇಲಿದ್ದಂತೆ ಪ್ರಯಾಣ ಭತ್ಯೆ ನೀಡುವುದು.
6. ಉನ್ನತ ಶಿಕ್ಷಣಕ್ಕೆ ಪ್ರತಿ ನಿಯೋಜಿಸಲ್ಪಡುವ ವೈದ್ಯರುಗಳು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ಅಡಿಯಲ್ಲಿ ತಿಳಿಸಿರುವ ಸವಲತ್ತುಗಳನ್ನು ಮಾತ್ರವೇ ಪಡೆಯುವುದು.
7. ಕರ್ನಾಟಕ ನಾಗರೀಕ ಸೇವಾ ನಿಯಮಗಳಲ್ಲಿ ನಿಯೋಜನೆಗೆ ವಿಧಿಸಿರುವ ಎಲ್ಲಾ ಷರತ್ತುಗಳನ್ನು ಪ್ರತಿ ನಿಯೋಜನೆಯಿಂದ ವ್ಯಾಸಂಗ ಪೂರೈಸಿದ ತರುವಾಯ ಪೂರೈಸುವುದು.
8. ವ್ಯಾಸಂಗದ ಸ್ಥಳದಲ್ಲಿ ದಿನಭತ್ಯೆ ಒಂದರ ಅರ್ಧದಷ್ಟು ಶಿಷ್ಯವೇತನ ನೀಡುವುದು.
9. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ಅಪೆಂಡಿಕ್ಸ್–1 'ಎ' ನಿಯಮ 1ರ ಉಪನಿಯಮ 8(ಡಿ) ರನ್ವಯ ವ್ಯಾಸಂಗ ಶುಲ್ಕವನ್ನು ಪಡೆಯಲು ಅರ್ಹರಿರುತ್ತಾರೆ.
10. ವ್ಯಾಸಂಗವನ್ನು ಪೂರ್ಣಗೊಳಿಸದೇ ಇದ್ದಲ್ಲಿ, ಸದರಿ ನಿಯೋಜನೆಗೆ ತಗುಲಿರುವ ಪೂರ್ಣ ವೆಚ್ಚವನ್ನು ಸರ್ಕಾರಕ್ಕೆ ಹಿಂದಿರುಗಿಸುವುದು.

ಸದರಿ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಆಇ 2 ಎಸ್.ಆರ್.ಎ. 2008, ದಿನಾಂಕ: 05.06.2008ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ/ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎನ್.ಹರಿಣಿಯಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,

(ಭಾರತೀಯ ವೈದ್ಯಪದ್ಧತಿ ಮತ್ತು ಸಮನ್ವಯ)

PR.1091

## ಇಂಧನ ಸಚಿವಾಲಯ

**ವಿಷಯ:** ಮೆ:: ಫಾರ್ಚ್ಯೂನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈ.ಲಿ., ಇವರಿಗೆ ಹಂಚಿಕೆಯಾಗಿರುವ 3.00 ಮೆ.ವ್ಯಾ. ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆ ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 157 ಎನ್‌ಸಿಇ 2006 ದಿನಾಂಕ: 16.10.2006.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ/06/SH-258/Shiragola MHS/161 ದಿನಾಂಕ26.12.2011/18.01.2012.

3) ಸರ್ಕಾರದ ಕಾರಣ ಕೇಳುವ ನೋಟಿಸ್ ದಿನಾಂಕ : 09.04.2012.

4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ/06/SH-258/ Shiragola MHS/2013/261 ದಿನಾಂಕ: 02.02.2013.

**ಪ್ರಸ್ತಾವನೆ :–**

ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ಆದೇಶದಲ್ಲಿ ಮೆ:: ಫಾರ್ಚ್ಯೂನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್, ಕಂಪನಿಯವರಿಗೆ ಚಿಕ್ಕಮಗಳೂರು ಜಿಲ್ಲೆಯ ನರಸಿಂಹರಾಜಪುರ ತಾಲ್ಲೂಕಿನ ಶಿರಗೊಲ ಗ್ರಾಮದ ಬಾಳೆಹೊನ್ನೂರಿನಿಂದ ಸಾಧಾರಣ 4 ಕಿ.ಮೀ. ನಲ್ಲಿ ಭದ್ರ ನದಿಗೆ ಅಡ್ಡಲಾಗಿ 3.00 ಮೆ.ವ್ಯಾ. ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಕೆಲವೊಂದು ಷರತ್ತಿಗೊಳಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ:: ಫಾರ್ಚ್ಯೂನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್, ಕಂಪನಿಯವರಿಗೆ ಚಿಕ್ಕಮಗಳೂರು ಜಿಲ್ಲೆಯ ನರಸಿಂಹರಾಜಪುರ ತಾಲ್ಲೂಕಿನ ಶಿರಗೊಲ ಗ್ರಾಮದ ಬಾಳೆಹೊನ್ನೂರಿನಿಂದ ಸಾಧಾರಣ 4 ಕಿ.ಮೀ. ನಲ್ಲಿ ಭದ್ರ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಿರುವ 3.00 ಮೆ.ವ್ಯಾ. ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ನೀಡಿರುವ ಕಾಲಾವಕಾಶವು ದಿನಾಂಕ :28.09.2010 ಕ್ಕೆ ಮುಕ್ತಾಯಗೊಂಡಿದ್ದು, ಸದರಿ ಅಭಿವೃದ್ಧಿದಾರರು ಯೋಜನೆಯನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ತೋರಿಲ್ಲದ ಹಿನ್ನಲೆಯಲ್ಲಿ, ಯೋಜನೆಯ ಹಂಚಿಕೆಯನ್ನು ರದ್ದುಗೊಳಿಸಬಹುದೆಂದು ಶಿಫಾರಸ್ಸುಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಈ ಹಿನ್ನಲೆಯಲ್ಲಿ ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ಕಾರಣ ಕೇಳುವ ನೋಟಿಸನ್ನು ಅಭಿವೃದ್ಧಿದಾರರಿಗೆ ಜಾರಿಮಾಡಿ, ಸದರಿ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಆದೇಶದಂತೆ ಅನುಷ್ಠಾನಗೊಳಿಸಿರುವುದರಿಂದ ಏಕೆ ರದ್ದು ಪಡಿಸಬಾರದು ಎಂಬುದಕ್ಕೆ ಸಮಜಾಯಿಷಿ ನೀಡುವಂತೆ ಕೋರಿ ರಿಜಿಸ್ಟರ್ಡ್ ಪೋಸ್ಟ್ ಮೂಲಕ ಕಳುಹಿಸಲಾಗಿತ್ತು. ಅಭಿವೃದ್ಧಿದಾರರು ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ :23.04.2012 ರ ಪತ್ರದಲ್ಲಿ ಯೋಜನೆಯನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾಗಿರುವುದಾಗಿ ತಿಳಿಸಿರುತ್ತಾರೆ. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರಿಗೆ ಅಭಿವೃದ್ಧಿದಾರರು ನೀಡಿರುವ ಉತ್ತರವನ್ನು ಪರಿಶೀಲಿಸಿ ಅಭಿಪ್ರಾಯ ನೀಡುವಂತೆ ದಿನಾಂಕ :04.05.2012ರ ಪತ್ರದಲ್ಲಿ ಕೋರಲಾಗಿತ್ತು.

ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ದಿನಾಂಕ :02.02.2013 ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರಿಗೆ ಯೋಜನೆಯು 2006 ರಲ್ಲಿ ಹಂಚಿಕೆಯಾಗಿದ್ದು ಅನುಷ್ಠಾನಕ್ಕೆ ನೀಡಿದ್ದ ಕಾಲಾವಧಿಯು ದಿನಾಂಕ :28.09.2010ಕ್ಕೆ ಮುಗಿದಿರುತ್ತದೆ. ಯೋಜನೆ ಹಂಚಿಕೆಯಾಗಿ 6 ವರ್ಷ ಕಳೆದರೂ ಕೇವಲ ಸರ್ವೇ ಕಾರ್ಯವನ್ನು ಕೈಗೊಂಡಿರುವ ಹೊರತಾಗಿ ಯಾವುದೇ ಪ್ರಗತಿಯನ್ನು ಅಭಿವೃದ್ಧಿದಾರರು ಸಾಧಿಸಿರುವುದಿಲ್ಲ ಹಾಗೂ ಸಂಬಂಧಪಟ್ಟ ಯಾವುದೇ ಇಲಾಖೆಗಳಿಂದ ಕ್ಲಿಯರ್‌ನ್ಸ್ ಪಡೆದಿರುವುದಿಲ್ಲವೆಂದು ತಿಳಿಸುತ್ತಾ, ಯೋಜನೆಯನ್ನು ರದ್ದು ಪಡಿಸಬಹುದೆಂದು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 51 ಎನ್‌ಸಿಇ 2012, ಬೆಂಗಳೂರು, ದಿನಾಂಕ: 05.08.2013.**

ಮೆ:: ಫಾರ್ಚ್ಯೂನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್, ಕಂಪನಿಯವರಿಗೆ ಸರ್ಕಾರಿ ಅದೇಶ ಸಂಖ್ಯೆ :ಇಎನ್ 157 ಎನ್‌ಸಿಇ 2006 ದಿನಾಂಕ :16.10.2006ರಲ್ಲಿ ಚಿಕ್ಕಮಗಳೂರು ಜಿಲ್ಲೆಯ ನರಸಿಂಹರಾಜಪುರ ತಾಲ್ಲೂಕಿನ ಶಿರಗೊಲ ಗ್ರಾಮದ ಬಾಳೆಹೊನ್ನೂರಿನಿಂದ ಸಾಧಾರಣ 4 ಕಿ.ಮೀ. ನಲ್ಲಿ ಭದ್ರ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಿರುವ 3.00 ಮೆ.ವ್ಯಾ. ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಹಾಗೂ ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ.ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**PR.1159**

**SC.50**

## ENERGY SECRETARIAT

**Sub :** Re-Constitution of "State Level Co-ordination Committee" for review of Rajiv Gandhi Grameen Vidyutikaran Yojana (RGGVY) in 12th & 13th Plan & change of nomenclature of the "State Level Co- ordination Committee" as "State Level Standing Committee".

**Ref :**
1) Government order No. EN 53 EEB 2008 dated 29.11.2008.
2) Government order No. EN 53 EEB 2008 dated 05.03.2009.
3) Ministry of Power, Government of India, Office Memorandum No.44/l0/ 2011-RE dated 29.08.2013.

**PREAMBLE :**

1. The Rajiv Gandhi Grameen Vidyutikaran Yojana (RGGVY) was launched in 2005 during X Plan by Government of India for providing electricity to un-electrified villages, habitations and for providing free connections to the BPL households and with a goal for providing access to electricity to all households in five years. The Ministry of Power, Government of India issued an Office Memorandum No. 44/19/2004-D(RE) dated 18.03.2005, amplifying the features of RGGVY scheme.
2. The RGGVY scheme was continued in XI Plan for attaining the goal of providing access to electricity to all households & for electrification of about 1.15 lakh un-electrified villages and also for providing electricity connections to 2.34 crore BPL households by 2009 vide Ministry of Power, Government of India Order No. 44/37/07-D(RE) dated 06.02.2008.
3. The Government of Karnataka constituted "State Level Co-ordination Committee" for review of Rajiv Gandhi Grameen Vidyutikaran Yojana (RGGVY) vide Government order read at (1) to overcome the problems in implementation and to review to progress of RGGVY. The "State Level Co-ordination Committee" was re constituted vide Government order read at (2).
4. Under RGGVY X Plan, 17 projects were sanctioned & the works are completed. Under RGGVY XI Plan, 10 projects are sanctioned out of which 2 projects, Udupi & Dakshina Kannada districts are sanctioned in phase-2 during Dec-2011 & Feb-2012 and the works of these districts are to be completed by Sept-2014 & Oct-2014 respectively as per the terms & conditions of REC (i.e project to be completed within 2 years from date of award of contract).
5. In continuation to the office memorandum No. 44/19/2004-D(RE) dated 18.03.2005 & order No. 44/37/07-D(RE) dated 06.02.2008 of Ministry of Power, Government of India, the "Rajiv Gandhi Grameen Vidyutikaran Yojana (RGGVY) is continued in the 12th & 13th Plan vide Ministry of Power, Government of India Office Memorandum read at (3).
6. As per para 7(v) of Office Memorandum read at (3) the State Government has to set up a "State Level Standing Committee" headed by the Chief Secretary.
7. In view of above, the matter is examined and the following order is issued:

**GOVERNMENT ORDER NO. EN 32 VSC 2013, BANGALORE, DATED : 16TH SEPTEMBER 2013.**

Government is pleased to re-constitute "State Level Co-ordination Committee" and change the nomenclature of "State Level Co-ordination Committee" as "State Level Standing Committee" for review of progress of RGGVY 12th & 13th Plan along with ongoing RGGVY XI Plan phase-2 projects with the following members with immediate effect and until further orders:

| | | |
|---|---|---|
| 1 | Chief Secretary to Government of Karnataka. | Chairman |
| 2 | Principal Secretary to Government, Energy Department. | Member |
| 3 | Principal Secretary to Government, Finance Department. | Member |
| 4 | Principal Secretary to Government, Revenue Department. | Member |
| 5 | Principal Secretary to Government, Rural Development & Panchayat Raj Department. | Member |
| 6 | Principal Secretary to Government, Forest, Ecology & Environment Department | Member |
| 7 | Principal Secretary to Government, Food-Civil Supplies & Consumer Affairs Department. | Member |
| 8 | The Managing Director, Karnataka Power Transmission Corporation Ltd.(KPTCL) | Members |
| 9 | The Managing Directors of all Electricity Supply Companies. (ESCOMs) | Member |
| 10 | The Managing Director, Karnataka Renewable Energy Development Ltd.(KREDL) | Member |
| 11 | The Zonal Manager, Rural Electrification Corporation (REC), Bangalore. | Member |
| 12 | The Director (Technical), Bangalore Electricity Supply Company(BESCOM) | Member Secretary |

The "State Level Standing Committee" shall:

- Examine the district-wise list of villages, habitations, BPL households to be covered under the RGGVY 12th & 13th Plan and recommend the project proposals formulated by the implementing agency in accordance with the guidelines.
- While considering the project proposals for its recommendations, shall ensure adequacy of upstream network commensurating with the proposed distributed network and availability of adequate power supply to cater to the load demand of project area.
- Monitor the progress, quality control and resolve issues relating to implementation of sanctioned projects viz. allocation of land for sub-stations, right of way, forest clearance, railway clearance, safety clearance etc.

By Order and in the name of the Governor of Karnataka,
**A.A. CHAPPARBAND,**
Under Secretary to Government,
Energy Department.

**P.R. 1189**
**SC - 50**

## ಕಾರ್ಮಿಕ ಸಚಿವಾಲಯ

**ವಿಷಯ:** ದರ್ಜಿ ಉದ್ದಿಮೆಯಲ್ಲಿನ ಕಾರ್ಮಿಕರಿಗೆ ಕನಿಷ್ಠ ವೇತನವನ್ನು ಪರಿಷ್ಕರಿಸಲು ಉಪ ಸಮಿತಿ ರಚಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂ : ಕಾಇ 69 ಎಲ್ಎಂಡಬ್ಲ್ಯೂ 2009, ದಿನಾಂಕ 30–03–2010.

2. ಕಾರ್ಮಿಕ ಆಯುಕ್ತರು ಪತ್ರ ಸಂಖ್ಯೆ ಕವೇಕಾ–2/ಪರಿಷ್ಕರಣೆ/ಸಿಆರ್–01/2013–14, ದಿನಾಂಕ 16–07–2013.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಅಧಿಸೂಚನೆಯಲ್ಲಿ ರಾಜ್ಯಾದ್ಯಂತ ದರ್ಜಿ ಉದ್ದಿಮೆಯಲ್ಲಿ ಕೆಲಸ ನಿರ್ವಹಿಸುತ್ತಿರುವ ಕಾರ್ಮಿಕರಿಗೆ ಕನಿಷ್ಠ ವೇತನವನ್ನು ಪರಿಷ್ಕರಿಸಲಾಗಿತ್ತು. ರಿಟ್ ಅರ್ಜಿ ಸಂಖ್ಯೆ : 14135/2010 ಪ್ರಕರಣದಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ಸದರಿ ಅಧಿಸೂಚನೆಯನ್ನು ರದ್ದುಪಡಿಸಿ, ಕನಿಷ್ಠ ವೇತನ ಪರಿಷ್ಕರಣೆಯ ಬಗ್ಗೆ ಅರ್ಜಿದಾರರು ಸೇರಿದಂತೆ ದರ್ಜಿ ಉದ್ದಿಮೆಗಳ ಮಾಲೀಕ ಮತ್ತು ಕಾರ್ಮಿಕ ಪ್ರತಿನಿಧಿಗಳಿಗೆ ಸೂಕ್ತ ಅವಕಾಶವನ್ನು ನೀಡಿ ನಂತರ ಯುಕ್ತ ಆದೇಶ ಹೊರಡಿಸುವಂತೆ ಆದೇಶಿಸಿದೆ. ಅದರಂತೆ ದರ್ಜಿ ಉದ್ದಿಮೆಗಳ ಮಾಲೀಕರ ಮತ್ತು ಕಾರ್ಮಿಕರ ಅಹವಾಲುಗಳನ್ನು ಆಲಿಸಿ, ಕನಿಷ್ಠ ವೇತನ ಪರಿಷ್ಕರಣೆಯ ಬಗ್ಗೆ ಸರ್ಕಾರಕ್ಕೆ ಶಿಫಾರಸ್ಸು ಮಾಡಲು ಕನಿಷ್ಠ ವೇತನ ಕಾಯ್ದೆ 1948ರ ಸೆಕ್ಷನ್ 5[1] (ಎ) ರಡಿ ಉಪ ಸಮಿತಿ ರಚಿಸುವಂತೆ ಕೋರಿ ಮೇಲೆ ಓದಲಾದ (2)ರ ಪತ್ರದಲ್ಲಿ ಕಾರ್ಮಿಕ ಆಯುಕ್ತರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ.

ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 1 ಎಲ್ಎಂಡಬ್ಲ್ಯೂ 2013, ಬೆಂಗಳೂರು, ದಿನಾಂಕ: 24–10–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯದ್ಯಂತ ದರ್ಜಿ ಉದ್ದಿಮೆಯಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನವನ್ನು ಪರಿಷ್ಕರಿಸಲು ಕನಿಷ್ಠ ವೇತನ ಕಾಯ್ದೆ 1948ರ ಸೆಕ್ಷನ್ 5(1)(ಎ) ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಕೆಳಕಂಡ ಸದಸ್ಯರುಗಳನ್ನೊಳಗೊಂಡ ಉಪ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| **ಸ್ವತಂತ್ರ ಸದಸ್ಯರು :–** | | |
| 1 | ಅಪರ ಕಾರ್ಮಿಕ ಆಯುಕ್ತರು (ಆಡಳಿತ) ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು. | ಅಧ್ಯಕ್ಷರು |
| 2 | ಜಂಟಿ ಕಾರ್ಮಿಕ ಆಯುಕ್ತರು, ಕನಿಷ್ಠ ವೇತನ ಶಾಖೆ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು. | ಸದಸ್ಯರು |
| 3 | ನಿರ್ದೇಶಕರು ಅಥವಾ ಅವರ ಪ್ರತಿನಿಧಿ, ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು–01. | ಸದಸ್ಯರು |
| 4 | ಪ್ರಾಧ್ಯಾಪಕರು ಹಾಗೂ ವಿಭಾಗದ ಮುಖ್ಯಸ್ಥರು, ಅರ್ಥಶಾಸ್ತ್ರ ವಿಭಾಗ, ಜ್ಞಾನ ಗಂಗೋತ್ರಿ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು–560056 | ಸದಸ್ಯರು |
| **ಮಾಲೀಕರ ಪ್ರತಿನಿಧಿಗಳು :–** | | |
| 1 | ಅಧ್ಯಕ್ಷರು/ಕಾರ್ಯದರ್ಶಿ ಕ್ಲಾತ್ ಮ್ಯಾನುಫ್ಯಾಕ್ಚರರ್ಸ್ ಅಸೋಸಿಯೇಷನ್ ಆಫ್ ಇಂಡಿಯಾ (ಕರ್ನಾಟಕ ಚಾಪ್ಟರ್) ಶಾಪ್ ನಂ. 40, 6ನೇ ಮಹಡಿ, ಗೀತಾ ಮ್ಯಾನ್ಷನ್, ಕೆಂಪೇಗೌಡ ರಸ್ತೆ, ಬೆಂಗಳೂರು–560009. | ಸದಸ್ಯರು |
| 2 | ವ್ಯವಸ್ಥಾಪಕ ಪಾಲುದಾರರು, ಮೆ॥ ವಿಗೋಸಾ ಎಕ್ಸ್‌ಪೋರ್ಟ್ಸ್, ನಂ. 2/5, 6ನೇ ಅಡ್ಡ ರಸ್ತೆ, ಹಳೇ ಗುಡ್ಡದಹಳ್ಳಿ, ಮೈಸೂರು ರಸ್ತೆ, ಬೆಂಗಳೂರು–560026. | ಸದಸ್ಯರು |
| 3 | ವ್ಯವಸ್ಥಾಪಕ ನಿರ್ದೇಶಕರು, ಮೆ॥ ಬಾಂಬೆ ರೆಯಾನ್ ಫ್ಯಾಷನ್ಸ್ ಲಿ. ನಂ. 26, 27, ಕೆಐಡಿಬಿ ಅಪರೆಲ್ ಪಾರ್ಕ್, ರೈಲ್ವೇ ನಿಲ್ದಾಣದ ಹತ್ತಿರ ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ. | ಸದಸ್ಯರು |

| | | |
|---|---|---|
| 4 | ವ್ಯವಸ್ಥಾಪಕ ನಿರ್ದೇಶಕರು, ಮೆ॥ ಗೋಕುಲ್ ದಾಸ್ ಎಕ್ಸ್‌ಪೋರ್ಟ್ಸ್ ಲಿ. ನಂ. 70, ಮಿಷನ್ ರಸ್ತೆ, ಬೆಂಗಳೂರು–560027. | ಸದಸ್ಯರು |
| 5 | ವ್ಯವಸ್ಥಾಪಕ ನಿರ್ದೇಶಕರು, ಮೆ॥ ದೇವಕಿ ಡಿಸೈನ್ಸ್, ನಂ. 49, ಹಿಲ್‌ವೀವ್ ಬಿಲ್ಡಿಂಗ್, ನಾಯಂಡಹಳ್ಳಿ, ಬೆಂಗಳೂರು–560039. | ಸದಸ್ಯರು |
| 6 | ಷಾಹೀ ಎಕ್ಸ್‌ಪೋರ್ಟ್ಸ್ ಪ್ರೈ. ಲಿ. ನಂ. 13, 14 ಮತ್ತು 15, ಸರ್ಜಾಪುರ ಮುಖ್ಯ ರಸ್ತೆ, ಬೆಳ್ಳಂದೂರು ಗೇಟ್, ಬೆಂಗಳೂರು–560102. | ಸದಸ್ಯರು |
| **ಕಾರ್ಮಿಕ ಪ್ರತಿನಿಧಿಗಳು :–** | | |
| 1 | ಅಧ್ಯಕ್ಷರು/ಕಾರ್ಯದರ್ಶಿ, ಗಾರ್ಮೆಂಟ್ಸ್ ಅಂಡ್ ಟೆಕ್ಸ್‌ಟೈಲ್ಸ್ ವರ್ಕರ್ಸ್ ಯೂನಿಯನ್, ನಂ. 17/I, ಮೊದಲನೇ ಮಹಡಿ, ಹೊಸಗುಡ್ಡದಹಳ್ಳಿ, ಬಸ್ ನಿಲ್ದಾಣದ ಹತ್ತಿರ, ಮೈಸೂರು ರಸ್ತೆ, ಬೆಂಗಳೂರು–560026. | ಸದಸ್ಯರು |
| 2 | ಅಧ್ಯಕ್ಷರು/ಕಾರ್ಯದರ್ಶಿ, ಗಾರ್ಮೆಂಟ್ಸ್ ಲೇಬರ್ ಯೂನಿಯನ್, ನಂ. 176, ರೈಲ್ವೇ ಗೇಟ್ ಹತ್ತಿರ, ಪಂತರ ಪಾಳ್ಯ, ನಾಯಂಡಹಳ್ಳಿ, ಮೈಸೂರ್ ರೋಡ್, ಬೆಂಗಳೂರು. | ಸದಸ್ಯರು |
| 3 | ಅಧ್ಯಕ್ಷರು/ಕಾರ್ಯದರ್ಶಿ, ಕರ್ನಾಟಕ ಸ್ಟೇಟ್ ಟೈಲರ್ಸ್ ಅಸೋಸಿಯೇಷನ್ (ರಿ), ರಾಜ್ಯ ಸಮಿತಿ, ಗೋರಿಗುಡ್ಡೆ, ಮಂಗಳೂರು. | ಸದಸ್ಯರು |
| 4 | ಅಧ್ಯಕ್ಷರು/ಕಾರ್ಯದರ್ಶಿ, ಕೋಲಾರ ಜಿಲ್ಲಾ ಹೊಲಿಗೆ ಕಾರ್ಮಿಕರ (ಟೈಲರ್ಸ್) ಕ್ಷೇಮಾಭಿವೃದ್ಧಿ ಯೂನಿಯನ್, ಬ್ಲ್ಯೂ ಸ್ಟಾರ್ ಮೆನ್ಸ್‌ವೇರ್, ಎಂ.ಬಿ. ರಸ್ತೆ, ಭಾರತ್ ಸ್ಟುಡಿಯೋ ಹತ್ತಿರ, ಗೌರಿ ಪೇಟೆ, ಕೋಲಾರ–563101. | ಸದಸ್ಯರು |
| 5 | ಅಧ್ಯಕ್ಷರು/ಕಾರ್ಯದರ್ಶಿ, ಕರ್ನಾಟಕ ಸ್ಟೇಟ್ ಟೈಲರ್ಸ್ ಅಸೋಸಿಯೇಷನ್, ಸದಾನಂದ ಟವರ್ಸ್, ಸಿಟಿ ಬಸ್ ಸ್ಟ್ಯಾಂಡ್ ಹತ್ತಿರ, ಮಣಿಪಾಲ ಬನಂಜಯ್ ರೋಡ್, ಉಡುಪಿ. | ಸದಸ್ಯರು |
| 6 | ಅಧ್ಯಕ್ಷರು/ಕಾರ್ಯದರ್ಶಿ, ಕೆ.ಜಿ.ಎಫ್. ಹೊಲಿಗೆ ಕಾರ್ಮಿಕರ ಸಂಘ, ರಾಜ್ ಕಮಲ್ ಕಾಂಪ್ಲೆಕ್ಸ್, 1ನೇ ಅಡ್ಡ ರಸ್ತೆ, ರಾಬರ್ಟ್‌ಸನ್ ಪೇಟೆ, ಕೆ.ಜಿ.ಎಫ್. | ಸದಸ್ಯರು |
| 7 | ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಸದಸ್ಯ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಕನಿಷ್ಠ ವೇತನ ಸಲಹ ಮಂಡಳಿ, ಬೆಂಗಳೂರು–29. | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಪ್ರಭುದೇವ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ.

**PR. 1190**

**SC - 50**

## ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವಾಲಯ

**ವಿಷಯ:** ಶ್ರೀ ರಾಜು ಬಾವಿಹಳ್ಳಿ, ಸಹಾಯಕ ನಿರ್ದೇಶಕರು, ಯುಸೇಕ್ರೀ ಇಲಾಖೆ, ಇವರ ವಿರುದ್ಧ ಇಲಾಖಾ ವಿಚಾರಣೆ–ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸಿ ಆದೇಶಿಸುವ ಬಗ್ಗೆ.

**ಓದಲಾಗಿದೆ:**

1. ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿ, ಜಿಲ್ಲಾ ಪಂಚಾಯತ್, ಧಾರವಾಡ, ಇವರ ಅ.ಸ. ಪತ್ರ ಸಂಖ್ಯೆ : ಅ.ಸ.ಪ.ಧಾ.ಜಿ.ಪಂ/ಉಕಾ/ಸಿ–14/ಸಿಆರ್/2009–10/11, ದಿನಾಂಕ 03–04–2010.
2. ಸರ್ಕಾರಿ ಆದೇಶ ಸಂಖ್ಯೆ : ಯುಸೇಇ 43 ಯುಇಸೇ 2010, ದಿನಾಂಕ 29–04–2010.
3. ಶ್ರೀ ರಾಜು ಬಾವಿಹಳ್ಳಿ, ಸಹಾಯಕ ನಿರ್ದೇಶಕರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ 03.05.2010ರ ಮನವಿ.
4. ಸರ್ಕಾರಿ ಆದೇಶ ಸಂಖ್ಯೆ : ಯುಸೇಇ 43 ಯುಇಸೇ 2010, ದಿನಾಂಕ 12–05–2010.
5. ನಿರ್ದೇಶಕರು, ಯುವಜನಾ ಸೇವಾ ಮತ್ತು ಕ್ರೀಡಾ ಇಲಾಖೆ, ಇವರ ಪತ್ರ ಸಂಖ್ಯೆ: ಡಿವೈಎಸ್‌ಎಸ್/ ಸಿ3/7/10–11, ದಿನಾಂಕ 24–07–2013.

**ಪ್ರಸ್ತಾವನೆ:**

ಶ್ರೀ ರಾಜು ಬಾವಿಹಳ್ಳಿ, ಸಹಾಯಕ ನಿರ್ದೇಶಕರು, ಯುಸೇಕ್ರೀ ಇಲಾಖೆ, ಇವರು 2007–08 ರಿಂದ 2009–10 ರವರೆಗೆ ಇಲಾಖೆಯ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವಲ್ಲಿ ದಿವ್ಯ ನಿರ್ಲಕ್ಷ್ಯ ವಹಿಸಿರುವರಲ್ಲದೆ, ಅನುದಾನ ಪೋಲು (laps) ಮಾಡಿರುವುದು ಹಾಗೂ ಸರ್ಕಾರಿ ಹಣ ದುರುಪಯೋಗಪಡಿಸಿಕೊಂಡಿರುವುದು ಮೊದಲಾದ ಆರೋಪಗಳ ಹಿನ್ನೆಲೆಯಲ್ಲಿ ಲೆಕ್ಕ ತಪಾಸಣೆ ಮಾಡಿ ವರದಿ ನೀಡಲು ಮುಖ್ಯ ಲೆಕ್ಕಾಧಿಕಾರಿಗಳಿಗೆ ಸೂಚಿಸಲಾಗಿ, ಅದರಂತೆ ಮುಖ್ಯ ಲೆಕ್ಕಾಧಿಕಾರಿಗಳು 2007–08 ರಿಂದ 2009–10 ನೇ ಸಾಲಿನ ವಿಶೇಷ ಲೆಕ್ಕ ತನಿಖಾ ವರದಿ ಸಲ್ಲಿಸಿದ್ದು, ಸದರಿ ವರದಿಯನ್ವಯ ದೊಡ್ಡ ಪ್ರಮಾಣದ ದುರುಪಯೋಗ, ಮಾರ್ಗಸೂಚಿ ಉಲ್ಲಂಘನೆ, ದಾಖಲೆಗಳನ್ನು ನಿರ್ವಹಿಸದಿರುವುದು ಮೊದಲಾದ ಅಂಶಗಳು ಕಂಡು ಬಂದಿದ್ದು, ಒಟ್ಟು ರೂ. 40,22,334/– (ನಲವತ್ತು ಲಕ್ಷದ ಇಪ್ಪತ್ತೆರೆಡು ಸಾವಿರದ ಮುನ್ನೂರ ಮೂವತ್ನಾಲ್ಕು ರೂಪಾಯಿಗಳು ಮಾತ್ರ) ದುರುಪಯೋಗ ಮಾಡಿರುತ್ತಾರೆಂದು ಮೇಲೆ ಓದಲಾದ (1)ರ ಪತ್ರದಲ್ಲಿ ತಿಳಿಸಲಾಗಿದೆ.

ಇವರು ದುರ್ನಡತೆ ಎಸಗಿರುವ ಆರೋಪಗಳಿಗಾಗಿ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿ 1957ರ ನಿಯಮ 10(1)(ಎ) ರನ್ವಯ ಇಲಾಖಾ ವಿಚಾರಣೆ ಬಾಕಿ ಇರಿಸಿ ದಿನಾಂಕ 29–04–2010 ರಂದು ಮೇಲೆ ಓದಲಾದ (2)ರ ಸರ್ಕಾರಿ ಆದೇಶದನ್ವಯ ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಲಾಯಿತು.

ಶ್ರೀ ರಾಜು ಬಾವಿಹಳ್ಳಿ, ಸಹಾಯಕ ನಿರ್ದೇಶಕರು, ಯುಸೇಕ್ರೀ ಇಲಾಖೆ, ಧಾರವಾಡ ಜಿಲ್ಲೆ ಇವರು ದಿನಾಂಕ 03–05–2010ರ ಮನವಿಯಲ್ಲಿ ತಮ್ಮನ್ನು ದೋಷಾರೋಪಣೆಯಿಂದ ಮುಕ್ತಗೊಳಿಸುವಂತೆ ಮೇಲೆ ಓದಲಾದ (3)ರ ಪತ್ರದಲ್ಲಿ ಕೋರಿರುತ್ತಾರೆ.

ಶ್ರೀ ರಾಜು ಬಾವಿಹಳ್ಳಿ, ಸಹಾಯಕ ನಿರ್ದೇಶಕರು, ಯುಸೇಕ್ರೀ ಇಲಾಖೆ, ಧಾರವಾಡ ಇವರ ಮನವಿಯನ್ನು ಪರಿಶೀಲಿಸಿ, ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿ 1957ರ ನಿಯಮ 10(5)(ಸಿ) ರಡಿ ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಅಮಾನತ್ತನ್ನು ತೆರವುಗೊಳಿಸಿ, ಸಹಾಯಕ ನಿರ್ದೇಶಕರ ಕಛೇರಿ, ಯುಸೇಕ್ರೀ ಇಲಾಖೆ, ಬಳ್ಳಾರಿ ಇಲ್ಲಿಗೆ ಮೇಲೆ ಓದಲಾದ (4)ರ ದಿನಾಂಕ 12–05–2010ರ ಆದೇಶದಲ್ಲಿ ನೇಮಿಸಲಾಗಿದೆ.

ಮೇಲೆ ಓದಲಾದ (5)ರ ಪತ್ರದಲ್ಲಿ ನಿರ್ದೇಶಕರು, ಯುಸೇಕ್ರೀ ಇಲಾಖೆ, ಶ್ರೀ ರಾಜು ಬಾವಿಹಳ್ಳಿ, ಸಹಾಯಕ ನಿರ್ದೇಶಕರು, ಬಳ್ಳಾರಿ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಪ್ರಸ್ತಾಪಿಸಿರುವುದರಿಂದ, ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್ ಧಾರವಾಡ, ಇವರು ಮಾಡಿರುವ ದೋಷಾರೋಪಣೆಯ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ನಡೆಸಲು ತೀರ್ಮಾನಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಯುಸೇಇ 43 ಯುಇಸೇ 2010, ಬೆಂಗಳೂರು, ದಿನಾಂಕ: 12–11–2013**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಯಿತು. ಶ್ರೀ ರಾಜು ಬಾವಿಹಳ್ಳಿ, ಸಹಾಯಕ ನಿರ್ದೇಶಕರು, ಯುಸೇಕ್ರೀ ಇಲಾಖೆ, ಇವರು 2007–08 ರಿಂದ 2009–10 ರವರೆಗೆ ಇಲಾಖೆಯ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವಲ್ಲಿ ದಿವ್ಯ ನಿರ್ಲಕ್ಷ್ಯ ವಹಿಸಿರುವುದಲ್ಲದೆ, ಅನುದಾನ ಪೋಲು (laps) ಮಾಡಿರುವುದು ಹಾಗೂ ಒಟ್ಟು ರೂ. 40,22,334/– (ನಲವತ್ತು ಲಕ್ಷದ ಇಪ್ಪತ್ತೆರೆಡು ಸಾವಿರದ ಮುನ್ನೂರ ಮೂವತ್ನಾಲ್ಕು ರೂಪಾಯಿಗಳು ಮಾತ್ರ) ಸರ್ಕಾರಿ ಹಣ ದುರುಪಯೋಗಪಡಿಸಿಕೊಂಡಿರುವುದು ಮೊದಲಾದ ಆರೋಪಗಳ ಹಿನ್ನೆಲೆಯಲ್ಲಿ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 (5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ರಾಜು ಬಾವಿಹಳ್ಳಿ, ಸಹಾಯಕ ನಿರ್ದೇಶಕರು, ಯುಸೇಕ್ರೀ ಇಲಾಖೆ, ಬಳ್ಳಾರಿ ಇವರ ವಿರುದ್ಧ ವಿಚಾರಣೆಯನ್ನು ನಡೆಸಲು ಶ್ರೀ ಕೆ. ರಾಧಾಕೃಷ್ಣ ಹೊಳ್ಳ, ನಿವೃತ್ತ ಜಿಲ್ಲಾ ನ್ಯಾಯಾಧೀಶರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಶ್ರೀ ಜಿತೇಂದ್ರ ಶೆಟ್ಟಿ, ಉಪ ನಿರ್ದೇಶಕರು, ಯುವ ಸಬಲೀಕರಣ ಮತ್ತು ಕ್ರೀಡಾ ನಿರ್ದೇಶನಾಲಯ, ಬೆಂಗಳೂರು, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ಈ ವಿಚಾರಣೆಗಾಗಿ ಶ್ರೀ ಕೆ. ರಾಧಾಕೃಷ್ಣ ಹೊಳ್ಳ, ಅವರು ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 06 ಸೇಇವಿ 2010 ದಿನಾಂಕ 28–04–2011 ರಲ್ಲಿ ನಿಗದಿಪಡಿಸಿರುವ ರೂ. 15,000/– (ಹದಿನೈದು ಸಾವಿರ ರೂಪಾಯಿಗಳು) ಗಳ ಸಂಭಾವನೆಯನ್ನು ಪಡೆಯುತ್ತಾರೆ.

ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಹಾಗೂ ಅಗತ್ಯ ಸಾಮಗ್ರಿ ಇತ್ಯಾದಿಗಳನ್ನು ಒದಗಿಸಲು ನಿರ್ದೇಶಕರು, ಯುವ ಸಬಲೀಕರಣ ಮತ್ತು ಕ್ರೀಡಾ ನಿರ್ದೇಶನಾಲಯ, ಇವರಿಗೆ ಸೂಚಿಸಲಾಗಿದೆ. ವಿಚಾರಣೆಯನ್ನು ಆರು ತಿಂಗಳೊಳಗಾಗಿ ಮುಕ್ತಾಯಗೊಳಿಸಿ ಸರ್ಕಾರಕ್ಕೆ ವರದಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ವಿ. ರಾಮಕೃಷ್ಣಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ.

PR. 1191

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಅರಕಲಗೂಡು ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ರೂ. 1800–00 ಲಕ್ಷಗಳಲ್ಲಿ ಕೈಗೆತ್ತಿಕೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:** 1. ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ : ಕಜಮಂ:ತಾಂತ್ರಿಕ/ಅರಕಲಗೂಡು–ಒಚಯೋ/2071/2012–13, ದಿನಾಂಕ 22–09–2012.

**ಪ್ರಸ್ತಾವನೆ:**

ಅರಕಲಗೂಡು ಪಟ್ಟಣವು ಹಾಸನ ಜಿಲ್ಲೆಯ ತಾಲ್ಲೂಕು ಕೇಂದ್ರವಾಗಿದ್ದು, 2001ರ ಜನಗಣತಿಯಂತೆ ಪಟ್ಟಣದ ಜನಸಂಖ್ಯೆಯು 15,184 ಇದ್ದು ಪ್ರಸ್ತುತ ಜನಸಂಖ್ಯೆ 17,500 ಇರುತ್ತದೆ. ಈ ಪಟ್ಟಣದ ಜನಸಂಖ್ಯೆಯು 2041 ರಲ್ಲಿ 27,238 ಆಗಬಹುದೆಂದು ನಿರೀಕ್ಷಿಸಲಾಗಿದೆ. ಅರಕಲಗೂಡು ಪಟ್ಟಣಕ್ಕೆ ಪ್ರಸ್ತುತ ಹೇಮಾವತಿ ನದಿಯಿಂದ 2.27 ಎಂಎಲ್‌ಡಿ ಸಾಮರ್ಥ್ಯದ ನೀರು ಸರಬರಾಜು ಯೋಜನೆಯನ್ನು ರೂ. 258.67 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೆತ್ತಿಕೊಂಡು 2001 ರಲ್ಲಿ ಚಾಲನೆಗೊಳಿಸಲಾಗಿದೆ. ನಂತರ ಪಟ್ಟಣದ ಬೆಳವಣಿಗೆಯನ್ನು ನಿರೀಕ್ಷಿಸಿ 2041 ಕ್ಕೆ ಅಂದಾಜಿಸಲಾದ 27238 ಜನಸಂಖ್ಯೆಗೆ ದಿನಂಪ್ರತಿ ತಲಾ 135 ಲೀಟರ್‌ನಂತೆ ನೀರು ಸರಬರಾಜು ಮಾಡಲು ಹಾಲಿ ಇರುವ ಸಾಮರ್ಥ್ಯದ ನೀರನ್ನು 3.0 ಎಂ.ಎಲ್.ಡಿ.ಗೆ ಹೆಚ್ಚಿಸಲು ರೂ. 1042.00 ಲಕ್ಷಗಳ ವೆಚ್ಚದಲ್ಲಿ ಕೈಗೆತ್ತಿಕೊಂಡಿದ್ದು, ಕಾಮಗಾರಿಗಳು ಪ್ರಗತಿಯಲ್ಲಿವೆ.

ಈ ಪಟ್ಟಣಕ್ಕೆ ಪ್ರಸ್ತುತ ಒಳಚರಂಡಿ ವ್ಯವಸ್ಥೆ ಇರುವುದಿಲ್ಲ. ಹೆಚ್ಚಿನ ಮನೆಯವರು ಸೋಕ್ ಪಿಟ್, ಲೀಚ್ ಪಿಟ್, ಸೆಪ್ಟಿಕ್ ಟ್ಯಾಂಕ್ ಇತ್ಯಾದಿ ವ್ಯವಸ್ಥೆಗಳನ್ನು ಮಾಡಿಕೊಂಡಿರುತ್ತಾರೆ. ಮತ್ತು ಕೆಲವು ಪ್ರದೇಶಗಳಲ್ಲಿ ಮಲಿನ ನೀರನ್ನು ತೆರೆದ ಚರಂಡಿಗೆ ಹರಿಯಲು ಬಿಡುತ್ತಿದ್ದು, ಇದರಿಂದ ಮೇಲ್ಮೈ

ಜಲಮೂಲ ಹಾಗೂ ಅಂತರ್ಜಲ ಕಲುಷಿತಗೊಳ್ಳುತ್ತಿದ್ದು, ಪಟ್ಟಣದ ಪರಿಸರವು ಹಾಳಾಗುತ್ತಿದ್ದು, ಸಾರ್ವಜನಿಕರ ಆರೋಗ್ಯದ ಮೇಲೆ ದುಷ್ಪರಿಣಾಮ ಉಂಟಾಗುತ್ತಿದೆ. ಆದ್ದರಿಂದ ಶಾಶ್ವತ ಪರಿಹಾರಕ್ಕಾಗಿ ಈ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆ ಕಲ್ಪಿಸುವುದು ಅವಶ್ಯವಾಗಿರುತ್ತದೆ.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಲಿ ರವರು ಯೋಜನೆಯ ಆರ್ಥಿಕ ಮಾದರಿಯನ್ನು ಸರ್ಕಾರದ ಆದೇಶ ಸಂಖ್ಯೆ : ನಅಇ 07 ಯುಡಬ್ಲ್ಯೂಎಸ್ 2011, ದಿನಾಂಕ 20–07–2011 ರಲ್ಲಿ ಹೊರಡಿಸಲಾದ ಹೊಸ ಆರ್ಥಿಕ ಮಾದರಿಯಲ್ಲಿ ನಿಗದಿಪಡಿಸಿದಂತೆ ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಯೋಜನೆಗೆ ಆಡಳಿತಾತ್ಮಕ ಅನುಮೋದನೆಯನ್ನು ಕೋರಿ ಪ್ರಸ್ತಾವನೆಯನ್ನು ಮೇಲೆ ಓದಲಾದ ಕ್ರಮಾಂಕ (1)ರ ಪತ್ರದಲ್ಲಿ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

| | |
|---|---|
| ಕರ್ನಾಟಕ ಸರ್ಕಾರದ ಅನುದಾನ (95%) | ರೂ. 1710.00 ಲಕ್ಷಗಳು |
| ಸ್ಥಳೀಯ ಸಂಸ್ಥೆಯ ಕೊಡುಗೆ (05%) | ರೂ. 90.00 ಲಕ್ಷಗಳು |
| ಒಟ್ಟು | **ರೂ. 1800.00 ಲಕ್ಷಗಳು** |

ಈ ಯೋಜನೆಯನ್ನು ಮಂಡಳಿಯ 2012–13ನೇ ಸಾಲಿನ ಅನುಮೋದಿತ ಕ್ರಿಯಾ ಯೋಜನೆಯಲ್ಲಿ ಸೇರಿಸಿ ರೂ. 15419.00 ಲಕ್ಷಗಳ ಮೊತ್ತವನ್ನು ಅನುವು ಮಾಡಲಾಗಿದೆ.

ಅರಕಲಗೂಡು ಪಟ್ಟಣ ಪಂಚಾಯತಿಯು ದಿನಾಂಕ 08–02–2012 ರಂದು ನಡೆದ ಸಾಮಾನ್ಯ ಸಭೆಯಲ್ಲಿ ಠರಾವು ಸಂಖ್ಯೆ 20 ರಲ್ಲಿ ಸದರಿ ಯೋಜನೆಯ ಆರ್ಥಿಕ ಮಾದರಿಯಂತೆ, ತನ್ನ ಪಾಲಿನ ಮೊತ್ತವಾದ ರೂ. 90.00 ಲಕ್ಷಗಳನ್ನು ಭರಿಸಲು ಒಪ್ಪಿಗೆ ನೀಡಿರುತ್ತದೆ, ಯೋಜನೆಯನ್ನು ಕಾರ್ಯಗತಗೊಳಿಸುವ ಸಮಯದಲ್ಲಿ ಒಂದು ವೇಳೆ ಸಾಮಗ್ರಿಗಳ ಬೆಲೆ ಏರಿಕೆಯಾದಲ್ಲಿ ಮತ್ತು ಇನ್ನಿತರೆ ಅನಿರೀಕ್ಷಿತ ಕಾರಣಗಳಿಂದ ಅಂದಾಜಿಗಿಂತ ಹೆಚ್ಚಾದ ವೆಚ್ಚವನ್ನು ಭರಿಸಲು ಒಪ್ಪಿಗೆ ಸೂಚಿಸಿದ್ದು, ಸದರಿ ಯೋಜನೆಯಡಿಯಲ್ಲಿ ಅಗತ್ಯವಿರುವ ವೆಟ್‌ವೆಲ್, ತ್ಯಾಜ್ಯ ನೀರು ಶುದ್ಧೀಕರಣ ಘಟಕ ನಿರ್ಮಿಸಲು ಹಾಗೂ ಗ್ರಾಮಸಾರ ಹೊರ ಹರಿವು ಕೊಳವೆ ಮಾರ್ಗಗಳನ್ನು ಅಳವಡಿಸಲು ಪಂಪಿಂಗ್ ಸ್ಟೇಷನ್ ಇತ್ಯಾದಿಗಳನ್ನು ನಿರ್ಮಿಸಲು ಅಗತ್ಯವಿರುವ ಜಮೀನನ್ನು ಪಟ್ಟಣ ಪಂಚಾಯಿತಿ ವತಿಯಿಂದ ಮಂಡಳಿಗೆ ಒದಗಿಸಲು ಒಪ್ಪಿರುತ್ತದೆ. ಇದಲ್ಲದೆ, ಯೋಜನೆಯ ಕಾಮಗಾರಿಗಳನ್ನು ಪೂರ್ಣಗೊಳಿಸಿದ ನಂತರ ಯೋಜನೆಯ ಕಾರ್ಯಾಚರಣೆ ಮತ್ತು ನಿರ್ವಹಣೆಯನ್ನು ವಹಿಸಿಕೊಳ್ಳಲು ಒಪ್ಪಿ ಠರಾವನ್ನು ಅಂಗೀಕರಿಸಿರುತ್ತದೆ.

ಈ ಹಿನ್ನೆಲೆಯಲ್ಲಿ ಯೋಜನಾ ವೆಚ್ಚದಲ್ಲಿ ಅಳವಡಿಸಿರುವ ಇಟಿಪಿ ಮತ್ತು ಸಾಧಿಲ್ವಾರು ವೆಚ್ಚಗಳನ್ನು ಶೇಕಡ 5 ಕ್ಕೆ ಮಿತಿಗೊಳಿಸಲು ಸರ್ಕಾರವು ತೀರ್ಮಾನಿಸಿ ಯೋಜನೆಯ ಮೂಲ ಅಂದಾಜು ಮೊತ್ತವಾದ ರೂ. 13,37,36,000/– ಲಕ್ಷಗಳಿಗೆ ಶೇಕಡ 5 ರಂತೆ ಇಟಿಪಿ ರೂ. 66,86,800 ಗಳನ್ನು ಸೇರಿಸಿ, ಬರುವ ಮೊತ್ತಕ್ಕೆ ಯೋಜನೆಯ ಅಂದಾಜನ್ನು ಮಿತಿಗೊಳಿಸಲಾಗಿರುತ್ತದೆ. ಇದಲ್ಲದೆ ಯೋಜನೆಯ ಅಂದಾಜಿನಲ್ಲಿ ಸೇರಿಸಿರುವ ಏರಿಕೆ ದರಗಳನ್ನು ಸ್ಥಳೀಯ ಸಂಸ್ಥೆಯೇ ಭರಿಸಲು ಒಪ್ಪಿರುವ ಹಿನ್ನೆಲೆಯಲ್ಲಿ ಸದರಿ ಮೊತ್ತವಾದ ರೂ. 1,60,48,320/– ಗಳನ್ನು ಹಾಗೂ ಭೂಸ್ವಾಧೀನ ವೆಚ್ಚ ರೂ.88,00,000/– ಗಳನ್ನು ಅಂದಾಜು ಪಟ್ಟಿಯಿಂದ ಹೊರತುಪಡಿಸಲಾಗಿದೆ.

ಸದರಿ ಯೋಜನೆಯ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 05 ಯುಡಿಎಸ್ 2012, ಬೆಂಗಳೂರು, ದಿನಾಂಕ: 03–10–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಅರಕಲಗೂಡು ಪಟ್ಟಣಕ್ಕೆ ಒಳಚರಂಡಿ ಯೋಜನೆಯನ್ನು ಒಟ್ಟು ಅಂದಾಜು ಮೊತ್ತ ರೂ. 1800.00 ಲಕ್ಷಗಳಲ್ಲಿ ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1. The Escalation charges should not form part of the estimate. It should be borne by the concerned ULB. The estimate is reduced to such extent.
2. ETP and escalation charges should not be more than 5% and the estimates should be revised accordingly.
3. The board shall invite the tender immediately after the handing over of the land required under the scheme in order to avoid time and cost run over.
4. Adequate provision to be made by the Board in the following Years for timely completion of the Project.
5. Escalations and Tender premium should be borne by the ULB.
6. Water rates as proposed by KUWS&DB have to be implemented to meet O & M cost of UGD.
7. KTPP provisions, quality control and timely completion should be ensured.
8. No provision for the revision of estimate cost.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : FD 216 Exp-9/2012, ದಿನಾಂಕ 12–12–2012 ರಲ್ಲಿ ನೀಡಿರುವ ಸಹಮತದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎಂ. ವಾಸುದೇವರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**PR. 1194**

## ನಗರಾಭಿವೃದ್ಧಿ ಸಚಿವಾಲಯ

### ತಿದ್ದುಪಡಿ

### ಸಂಖ್ಯೆ ನಅಇ 68 ಮೈಅಪ್ರಾ 2013, ಬೆಂಗಳೂರು, ದಿನಾಂಕ 07-11-2013

ಸರ್ಕಾರದ ಆದೇಶ ಸಂಖ್ಯೆ : ನಅಇ 483 ಮೈಅಪ್ರಾ 2006 ದಿನಾಂಕ 18-02-2008 ರಲ್ಲಿ ಕುಶಾಲನಗರ ಪಟ್ಟಣಕ್ಕೆ ಸ್ಥಳೀಯ ಯೋಜನಾ ಪ್ರದೇಶವೆಂದು ಘೋಷಿಸಿರುವ ಅನುಬಂಧ-1 ರಲ್ಲಿನ ಕ್ರಮ ಸಂಖ್ಯೆ : (05) ರಲ್ಲಿನ ವಿವರಗಳನ್ನು ಈ ಕೆಳಕಂಡಂತೆ ಓದಿಕೊಳ್ಳತಕ್ಕದ್ದು.

| ಕ್ರಮ ಸಂಖ್ಯೆ | ಗ್ರಾಮದ ಹೆಸರು | ಸರ್ವೆ ನಂ. | ವಿಸ್ತೀರ್ಣ (ಎಕರೆ) | ಷರಾ |
|---|---|---|---|---|
| 5. | ಮಾದಪಟ್ಟಣ | ಸ.ನಂ. 1 ರಿಂದ 9, 16, 43 ರಿಂದ 48 ಗಳನ್ನು ಹೊರತುಪಡಿಸಿ ಹಾಗೂ ಸ.ನಂ. 49ರ ಭಾಗಶಃ 392.5 ಚ.ಮೀ. ಹೊರತುಪಡಿಸಿ ಉಳಿದ 107.5 ಚ.ಮೀ. ಸೇರಿಸಿ ಉಳಿದ ಕಂದಾಯ ಗ್ರಾಮ | 345.61 | ಭಾಗಶಃ ಗ್ರಾಮ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎಂ. ವಾಸುದೇವರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

PR. 1195
SC - 50

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಬಿ.ಬಿ.ಭಜಂತ್ರಿ, ದ್ವಿ.ದ.ಸ., ಐಆರ್‌ಬಿ., ಬಿಜಾಪುರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, ಇಂಡಿಯಾ ರಿಸರ್ವ್ ಬೆಟಾಲಿಯನ್, ಬಿಜಾಪುರ ರವರ ಆದೇಶ ಸಂಖ್ಯೆ:2510/ಸಿಬ್ಬಂದಿ(5)/ 2003-04, ದಿನಾಂಕ 18-12-2010.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು ರವರ ಆದೇಶ ಸಂಖ್ಯೆ: ಅಪೀಲು/12/2010-11, ದಿನಾಂಕ: 20-08-2011.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 10-11-2011.
4. ಇದೇ ಸಮ ಸಂಖ್ಯೆಯ ಪತ್ರ ದಿನಾಂಕ: 19-04-2012.
5. ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ:ಅಪೀಲು-2/20/2007-08, ದಿನಾಂಕ 03-07-2012.

**ಪ್ರಸ್ತಾವನೆ:**

ಶ್ರೀ ಬಿ.ಬಿ.ಭಜಂತ್ರಿ, ದ್ವಿತೀಯ ದರ್ಜೆ ಸಹಾಯಕ, ಇಂಡಿಯಾ ರಿಸರ್ವ್ ಬೆಟಾಲಿಯನ್, ಬಿಜಾಪುರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ ಇವರ ವಿರುದ್ಧ ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 12 ರಡಿ ದೋಷಾರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷಾರೋಪಣೆ:**

1) ಶ್ರೀ ಬಿ.ಬಿ.ಭಜಂತ್ರಿ, ದ್ವಿತೀಯ ದರ್ಜೆ ಸಹಾಯಕ, ಇಂಡಿಯಾ ರಿಸರ್ವ್ ಬೆಟಾಲಿಯನ್ ಆದ ನೀವು ತತ್ಪೂರ್ವದಲ್ಲಿ ಪೊಲೀಸ್ ಅಧೀಕ್ಷಕರು ರೈಲ್ವೇಸ್, ಬೆಂಗಳೂರು ಇವರ ಕಛೇರಿಯಲ್ಲಿ ದ್ವಿ.ದ.ಸ ರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಸಾರ್ವಜನಿಕ ಹಿತದೃಷ್ಟಿ ಮೇರೆಗೆ ನಿಮ್ಮನ್ನು ಐ.ಆರ್.ಬಿ, ಬಿಜಾಪುರ ಘಟಕಕ್ಕೆ ವರ್ಗಾವಣೆ ಮಾಡಲಾಗಿ, ಪೊಲೀಸ್ ಅಧೀಕ್ಷಕರು ರೈಲ್ವೇಸ್, ಬೆಂಗಳೂರು ಇವರು ದಿನಾಂಕ: 16-07-2010ರ ಅಪರಾಹ್ನದಿಂದ ಜಾರಿಗೆ ಬರುವಂತೆ ಕರ್ತವ್ಯದಿಂದ ಬಿಡುಗಡೆಗೊಳಿಸಿ ವರ್ಗಾವಣೆಗೊಂಡಿರುವ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಿದ್ದರು, ಅದರಂತೆ ದಿನಾಂಕ: 17-07-2010 ರಂದು ಕರ್ತವ್ಯಕ್ಕೆ ವರದಿ ಮಾಡಿಕೊಳ್ಳಬೇಕಾಗಿದ್ದ ನೀವು ದಿನಾಂಕ: 17-07-2010 ರಿಂದ ದಿನಾಂಕ:31-10-2010 ರವರೆಗೆ (ಒಟ್ಟು 107 ದಿನಗಳು) ಕರ್ತವ್ಯಕ್ಕೆ ವರದಿಮಾಡಿಕೊಳ್ಳದೆ, ಹಿರಿಯ ಅಧಿಕಾರಿಗಳ ಆದೇಶಗಳನ್ನು ಉಲ್ಲಂಘನೆ ಮಾಡಿ ಅವಿಧೇಯತೆ ತೀವ್ರ ನಿರ್ಲಕ್ಷತೆ ಮತ್ತು ಬೇಜಾವಬ್ದಾರಿತನ ಪ್ರದರ್ಶಿಸಿರುತ್ತೀರಿ.

2) ತಾವು ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೆ, ನಿರಂತರವಾಗಿ ಗೈರು ಹಾಜರಿಯಲ್ಲಿ ಇದ್ದುದರಿಂದ, ಕೂಡಲೇ ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಿ ಪೊಲೀಸ್ ಅಧೀಕ್ಷಕರು ರೈಲ್ವೇಸ್, ಬೆಂಗಳೂರು ರವರ ಕಛೇರಿಯಿಂದ ಹೊರಡಿಸಲಾದ ಜ್ಞಾಪನ ಪತ್ರ ದಿನಾಂಕ:28-08-2010ನ್ನು ಸ್ವೀಕರಿಸಿರುವುದಿಲ್ಲ, ಇದಲ್ಲದೆ ಅದೇ ಕಛೇರಿಯಿಂದ ತಾತ್ಕಾಲಿಕ ಕರ್ತವ್ಯ ಪರಿತ್ಯಾಗ ಸೂಚನಾ ಪತ್ರ ಸಂಖ್ಯೆ: 08/ಡಿಇ/ಡಿಎನ್/2010-11, ದಿನಾಂಕ: 24-09-2010ನ್ನು ಸ್ಥಳೀಯ ಪೊಲೀಸರ ಮೂಲಕ ಕಳಿಸಿದಾಗಲೂ ಸಹ ಅದನ್ನು ಸ್ವೀಕರಿಸದೇ ತೀವ್ರ ಕರ್ತವ್ಯ ನಿರ್ಲಕ್ಷತೆ, ಅವಿಧೇಯತೆ, ಮತ್ತು ಬೇಜವಾಬ್ದಾರಿ ಪ್ರದರ್ಶಿಸಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣಾ ಪತ್ರ ಹೊರಡಿಸಿ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, ಇಂಡಿಯಾ ರಿಸರ್ವ್ ಬೆಟಾಲಿಯನ್, ಬಿಜಾಪುರ ಇವರು ಮೇಲೆ ಉಲ್ಲೇಖ (1) ರಲ್ಲಿ ಓದಲಾದ ದಿನಾಂಕ:18-12-2010ರ ಆದೇಶದಲ್ಲಿ ಅರ್ಜಿದಾರರು ದಿನಾಂಕ: 17-07-2010 ರಿಂದ 31-10-2010ರ ವರಗೆ ಕರ್ತವ್ಯಕ್ಕೆ ಗೈರು ಹಾಜರಾದ ಒಟ್ಟು 107 ದಿನಗಳ ಅವಧಿಯನ್ನು ವೇತನ ರಹಿತ ರಜೆ ಎಂದು ಪರಿಗಣಿಸಿ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಒಂದು ವರ್ಷ ಕಾಲ ಮುಂದೂಡಲಾದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೋಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು ಇವರಿಗೆ ಮೇಲ್ಮನವಿ ಸಲ್ಲಿಸಿದ್ದು, ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುಂತಹ ಯಾವುದೇ ಅಂಶಗಳು ಇರುವುದಿಲ್ಲವೆಂದು ಉಲ್ಲೇಖ (2)ರಲ್ಲಿ ಆದೇಶದಲ್ಲಿ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದ್ದರು.

ಈ ಆದೇಶಗಳ ವಿರುದ್ಧ ಇವರು ಸರ್ಕಾರಕ್ಕೆ ಉಲ್ಲೇಖ (3)ರಲ್ಲಿರುವ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸುತ್ತಾ, ತಾವು ವರ್ಗಾವಣಾವಧಿಯಲ್ಲಿ ಅನಾರೋಗ್ಯದಿಂದ ನರಳುತ್ತಿದ್ದು ಈ ಬಗ್ಗೆ ವೈದ್ಯಕೀಯ ಪ್ರಮಾಣ ಪತ್ರಗಳು ವೈದ್ಯಕೀಯ ಮಂಡಳಿಯಿಂದ ಪರಿಶೀಲನೆಗೆ ಒಳಪಡದೆ ಇರುವುದರಿಂದ ಹಾಗೂ ತಾವು ದಿನಾಂಕ: 15–07–2010 ರಿಂದಲೇ ಕಾಯಿಲೆ ರಜೆಯ ಮೇಲಿದ್ದ ಕಾರಣ ತಮ್ಮನ್ನು ದಿನಾಂಕ: 16–07–2010ರಂದು ಬಿಡುಗಡೆ ಮಾಡಿರುವ ಬಗ್ಗೆ ತಮಗೆ ಮಾಹಿತಿ ಇರುವುದಿಲ್ಲ, ತಾವು ಹಾವೇರಿ ಜಿಲ್ಲೆಯ ಎಲಗಚ್ಚ ಗ್ರಾಮದವರಾಗಿದ್ದು, ಜುಲೈ 2010ರ ಅತಿವೃಷ್ಠಿ ಮಳೆಯಿಂದಾಗಿ ತಮ್ಮ ಪಿತ್ರಾರ್ಜಿತ ಮನೆ ಬಿದ್ದು ಹೋಗಿದ್ದರಿಂದಾಗಿ ಅಲ್ಲಿ ವಾಸಿಸಲು ಸ್ವಂತ ಸೂರು ಇಲ್ಲದ ಕಾರಣ ತಮ್ಮ ಅಕ್ಕನ ಮನೆಯಲ್ಲಿ ವಾಸವಿದ್ದ ಸಮಯದಲ್ಲಿ ಕಮಾಂಡೆಂಟ್ ರವರು ದಿನಾಂಕ:28–08–2010ರ ಮತ್ತು 24–09–2010ರ ಸೂಚನಾ ಪತ್ರಗಳನ್ನು ತಮ್ಮ ಸ್ವಗ್ರಾಮ ವಿಳಾಸಕ್ಕೆ ಕಳುಹಿಸಿದ್ದು, ಈ ಸಮಯದಲ್ಲಿ ತಾವು ಅಲ್ಲಿ ವಾಸಿಸದ ಕಾರಣ ಹಿಂದಿರುಗಿ ಐ.ಆರ್.ಬಿ ಕಛೇರಿಗೆ ತಲುಪಿರುತ್ತವೆ. ಈ ವಿಷಯದಲ್ಲಿ ವಿನಾಃಕಾರಣ ತಮ್ಮನ್ನು ಹೊಣೆಗಾರನ್ನಾಗಿ ಮಾಡಿ ವಿಧಿಸಿರುವ ಶಿಕ್ಷೆಯನ್ನು ತಳ್ಳಿ ಹಾಕಿ ನ್ಯಾಯ ದೊರಕಿಸಿ ಕೊಡುವಂತೆ ಮತ್ತು ವೈದ್ಯಕೀಯ ಕಾರಣದ ಮೇಲೆ ಗೈರು ಹಾಜರಾಗಿರುವ ಅವಧಿಯನ್ನು ಇತ್ಯರ್ಥ ಪಡಿಸುವಂತೆ ಕೋರಿರುತ್ತಾರೆ. ಈ ಬಗ್ಗೆ ಪರಿಶೀಲಿಸಿ ಅಗತ್ಯ ದಾಖಲೆ ಹಾಗೂ ಸ್ಪಷ್ಟ ಅಭಿಪ್ರಾಯದೊಂದಿಗೆ ವರದಿಯನ್ನು ನೀಡುವಂತೆ ಡಿಜಿ ಮತ್ತು ಐಜಿಪಿಯವರನ್ನು ಉಲ್ಲೇಖ (4) ರಲ್ಲಿರುವ ಪತ್ರದಲ್ಲಿ ಕೋರಲಾಗಿತ್ತು.

ಮೇಲೆ ಓದಲಾದ (5) ರ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ರವರು ಈ ಬಗ್ಗೆ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುತ್ತಾ, ಅರ್ಜಿದಾರರ ಮೇಲೆ ಹೊರಿಸಲಾದ ಆರೋಪಗಳಿಗೆ ಅನುಗುಣವಾಗಿ ಶಿಕ್ಷೆ ವಿಧಿಸಿರುವುದು ಸಮಂಜಸವಾಗಿರುವುದರಿಂದ ಇಲಾಖೆಯ ಆಡಳಿತಾತ್ಮಕ ಹಿತದೃಷ್ಟಿಯಿಂದ ಮೇಲ್ಮನವಿಯ ಅರ್ಜಿಯನ್ನು ತಿರಸ್ಕರಿಸುವಂತೆ ಕೋರಿರುತ್ತಾರೆ. ಈ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಲಾಯಿತು. ಇವರ ಸೇವಾ ವಿವರಗಳನ್ನು ಪರಿಶೀಲಿಸಿದಲ್ಲಿ, ಇವರು ಅನುಕಂಪದ ಆಧಾರದ ಮೇಲೆ ನೌಕರಿಗೆ ಸೇರಿದ್ದು, ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗುವ ಪ್ರವೃತ್ತಿ ಹೊಂದಿರುವರೆಂದೂ, ತಿಳಿಸಿರುವ ಹಿನ್ನೆಲೆಯಲ್ಲಿ ಹಾಗೂ ಡಿಜಿ ಮತ್ತು ಐಜಿಪಿ ಯವರು ಇವರ ಪರಿಷ್ಕರಣಾ ಮೇಲನವಿಯನ್ನು ತಿರಸ್ಕರಿಸಲು ಶಿಫಾರಸ್ಸು ಮಾಡಿರುವ ಹಿನ್ನೆಲೆಯಲ್ಲಿ ಮತ್ತು ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾಸ್ತವಾಂಶಗಳನ್ನೂ, ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಿದಾಗ, ವರ್ಗಾವಣೆಗೊಂಡ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗದೇ ಅನಧಿಕೃತ ಗೈರು ಹಾಜರಾಗಿ ತದನಂತರ ವರ್ಗಾವಣೆ ಆ ಅವಧಿಗೆ ರಜಾ ಅರ್ಜಿಗಳನ್ನು ಸಲ್ಲಿಸಿರುವುದು ಕಂಡುಬರುತ್ತದೆ. ಮೇಲ್ಮನವಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಒಇ 36 ಪೊಸಿಲಿ 2012 ಬೆಂಗಳೂರು, ದಿನಾಂಕ: 31–10–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಬಿ.ಬಿ.ಭಜಂತ್ರಿ, ದ್ವಿ.ದ.ಸ., ಐಆರ್‌ಬಿ., ಬಿಜಾಪುರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್.ರವಿಪ್ರಕಾಶ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಎ).

**P.R. 1112**

## ಒಳಾಡಳಿತ ಸಚಿವಾಲಯ

**ವಿಷಯ:** ಡಾ.ಎಸ್.ಮಾಲಿನಿ, ಹಿಂದಿನ ಸಹಾಯಕ ನಿರ್ದೇಶಕರು, ನಂ.14/3, 1ನೇ ಮುಖ್ಯರಸ್ತೆ, ಬ್ರಹ್ಮಪರಂ, ರಾಮಚಂದ್ರಪುರಂ, ಬೆಂಗಳೂರು–60 ರವರನ್ನು ಸಹಾಯಕ ನಿರ್ದೇಶಕರು, ಎಫ್‌ಎಸ್‌ಎಲ್ ಕರ್ತವ್ಯಕ್ಕೆ ಪುನರ್ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:**

1) ಸರ್ಕಾರದ ಅಧಿಸೂಚನೆ ಸಂಖ್ಯೆ:ಒಇ 28 ಪೊಸಿಲಿ 2005, ದಿನಾಂಕ:30–06–2007.
2) ಡಿಜಿ ಮತ್ತು ಐಜಿಪಿರವರ ಪತ್ರಗಳ ಸಂಖ್ಯೆ: CRM/05/MC/ 2007, 17–11–2008, 06–12–2008 ಮತ್ತು 26–12–2008.
3) ಸರ್ಕಾರದ ಅಧಿಸೂಚನೆ ಸಂಖ್ಯೆ:ಒಇ 90 ಪೊಸಿಲಿ 2008, ದಿನಾಂಕ:28–02–2009.
4) ಮಾನ್ಯ ಕೆಎಟಿಯ ಅರ್ಜಿ ಸಂಖ್ಯೆ:1010/2009, ದಿನಾಂಕ:16–12–2009.
5) ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ರಿಟ್‌ಅರ್ಜಿ ಸಂಖ್ಯೆ:23406/2010(ಎಸ್–ಕೆಎಟಿ)ರಲ್ಲಿನ ತೀರ್ಪು ದಿನಾಂಕ: 15–04–2013.
6) ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ದಿನಾಂಕ:15–04–2013ರ ತೀರ್ಪಿನ ವಿರುದ್ಧ ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ಎಸ್.ಎಲ್.ಪಿ. ದಾಖಲಿಸುವ ಸಂಬಂಧ ಹೊರಡಿಸಿದ ಆದೇಶ ಸಂಖ್ಯೆ:ಒಇ 47 ಪೊಸಿಲಿ 2012, ದಿನಾಂಕ:04–06–2013.
7) ಸರ್ಕಾರಿ ವಕೀಲರ ಪತ್ರ ದಿನಾಂಕ:19–06–2013.
8) ಮಾನ್ಯ ಸರ್ವೋಚ್ಚ ನ್ಯಾಯಾಲಯದ Special Leave to Appeal (Civil) No.25308/2013ರ ಆದೇಶ ದಿನಾಂಕ: 23–08–2013.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಅಧಿಸೂಚನೆಯಲ್ಲಿ ವಿಶೇಷ ನೇಮಕಾತಿ ಸಮಿತಿಯು ಪರಿಶೀಲಿಸಿ, ಆಯ್ಕೆ ಮಾಡಿ ಶಿಫಾರಸ್ಸು ಮಾಡಿರುವ ಡಾ.ಎಸ್.ಮಾಲಿನಿರವರನ್ನು ರೂ.14050–25050 ವೇತನ ಶ್ರೇಣಿಯ ಸಹಾಯಕ ನಿರ್ದೇಶಕರು, ಫೊರೆನ್ಸಿಕ್ ಸೈಕಾಲಜಿ, ನ್ಯಾಯ ವಿಜ್ಞಾನ ಪ್ರಯೋಗಾಲಯ, ಬೆಂಗಳೂರು ಹುದ್ದೆಗೆ ಪರಿವೀಕ್ಷಣೆಯ ಮೇಲೆ (On Probation) ನೇಮಕ ಮಾಡಿ ಆದೇಶಿಸಲಾಗಿತ್ತು.

ಮೇಲೆ ಓದಲಾದ (2)ರ ಪತ್ರಗಳಲ್ಲಿ ಡಿಜಿ ಮತ್ತು ಐಜಿಪಿರವರು ಡಾ.ಎಸ್.ಮಾಲಿನಿ, ಸಹಾಯಕ ನಿರ್ದೇಶಕರು, ಫೊರೆನ್ಸಿಕ್ ಸೈಕಾಲಜಿರವರ ಕೆಲಸ, ವರ್ತನೆ ತೃಪ್ತಿಕರವಾಗಿಲ್ಲವೆಂದು ಹಾಗೂ ಇವರ ಸಮಗ್ರ ಕಾರ್ಯವೈಖರಿಯು ತೃಪ್ತಿಕರವಾಗಿಲ್ಲವೆಂದು ಮುಂದುವರಿದು ಡಾ.ಎಸ್.ಮಾಲಿನಿರವರ

ವಯಸ್ಸು ಮತ್ತು ಇವರು ಸಹಾಯಕ ನಿರ್ದೇಶಕರು, ನ್ಯಾಯ ವಿಜ್ಞಾನ ಪ್ರಯೋಗಾಲಯ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಖಾಸಗಿ ನರ್ಸಿಂಗ್ ಹೋಮ್‌ನಲ್ಲಿ ಕಾರ್ಯನಿರ್ವಹಿಸುತ್ತಿರುವ ಬಗ್ಗೆ ಮತ್ತು ತಮ್ಮ ನೇಮಕಾತಿ ಸಂದರ್ಭದಲ್ಲಿ ಡಾ.ಎಸ್.ಮಾಲಿನಿರವರು ತಮ್ಮ ಜನ್ಮ ದಿನಾಂಕವನ್ನು 12–05–1964 ಎಂದು ನಮೂದಿಸಿರುತ್ತಾರೆ. ಇವರು ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಪದವಿ ಪಡೆದಿರುವುದು ಏಪ್ರಿಲ್–1980 ಎಂದು ಅಂಕ ಪ್ರಮಾಣ ಪತ್ರದಲ್ಲಿ ನಮೂದಿಸಲಾಗಿದೆ. ಇದು ಡಾ.ಎಸ್.ಮಾಲಿನಿರವರು ತಮ್ಮ ಪದವಿ ಪರೀಕ್ಷೆಯನ್ನು 16 ವರ್ಷಗಳಿರುವಾಗಲೇ ಉತ್ತೀರ್ಣರಾಗಿರುವುದು ಕಂಡುಬರುತ್ತದೆ ಮತ್ತು 2 ವರ್ಷದ ಪಿ.ಯು.ಸಿ ಮತ್ತು 3 ವರ್ಷದ ಪದವಿಯನ್ನು ಲೆಕ್ಕ ಹಾಕಿದ್ದಲ್ಲಿ ಇವರು 11 ವರ್ಷ ಇದ್ದಾಗಲೇ ಎಸ್.ಎಸ್.ಎಲ್.ಸಿ.ಯನ್ನು ಮಾಡಿದಂತಾಗುತ್ತದೆ. ಆದುದರಿಂದ ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯ Authority ಯಲ್ಲಿನ ದಾಖಲೆಗಳನ್ನು ಪರಿಶೀಲಿಸಿದಾಗ ಅವರ ಜನ್ಮದಿನಾಂಕವನ್ನು 12–05–1960 ಎಂದು ನಮೂದಿಸಿರುವುದು ಕಂಡು ಬಂದಿರುತ್ತದೆ. ಹೀಗಾಗಿ ಇವರ ಜನ್ಮ ದಿನಾಂಕವನ್ನು ನಮೂದಿಸಿ ಸಲ್ಲಿಸಿರುವ ಎಸ್.ಎಸ್.ಎಲ್.ಸಿ. ಅಂಕ ಪ್ರಮಾಣ ಪತ್ರದಲ್ಲಿರುವ ದಿನಾಂಕ ಮತ್ತು ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರ ದಾಖಲೆಗಳ ಪ್ರಕಾರ ವಿವಿಧ ದಿನಾಂಕಗಳಾಗಿರುತ್ತದೆ. ಮುಂದುವರಿದು, ಇವರು ವಿಶೇಷ ನೇಮಕಾತಿ ಅಡಿಯಲ್ಲಿ ಸಲ್ಲಿಸಿದ ಎಲ್ಲಾ ದಾಖಲೆಗಳನ್ನು ಡಾ.ಬಿ.ಕೆ.ಮುರಳೀಧರ, ಪ್ರೊಫೆಸರ್, Department of Mechanical Engineering, UVCE, Bangalore ಇವರು ದೃಢೀಕರಿಸಿದ್ದು, ವಿಚಾರಣೆಯಿಂದ ಇವರು ಡಾ.ಎಸ್.ಮಾಲಿನಿಯವರ ಪತಿಯೆಂದು ಕಂಡುಬಂದಿದ್ದು, ಈ ಕೆಲಸವನ್ನು ಪಡೆಯುವ ಸಲುವಾಗಿ ಸುಳ್ಳು ದಾಖಲೆಗಳನ್ನು ನೀಡಿರುವುದು, ಇದರಲ್ಲಿ ಇವರ ಪತಿಯಾದ ಡಾ.ಬಿ.ಕೆ.ಮುರಳೀಧರರವರು ಸಹ ಭಾಗಿಯಾಗಿರುವುದು ಕಂಡುಬಂದಿರುತ್ತದೆ. ಗೃಹ ಇಲಾಖೆಯ ಅಧಿಸೂಚನೆ ದಿನಾಂಕ:24–03–2007ರಂದು ಸಹಾಯಕ ನಿರ್ದೇಶಕರು, ನ್ಯಾಯ ವಿಜ್ಞಾನ ಪ್ರಯೋಗಾಲಯ ಹುದ್ದೆಗೆ ಗರಿಷ್ಠ ವಯೋಮಿತಿಯನ್ನು 45 ವರ್ಷಗಳೆಂದು ನಿಗದಿಪಡಿಸಲಾಗಿದ್ದು, ಇವರು ನೇಮಕಾತಿಗೊಂಡ 2007ನೇ ಸಾಲಿನಲ್ಲಿ ಡಾ.ಎಸ್.ಮಾಲಿನಿರವರ ಜನ್ಮ ದಿನಾಂಕ:12–05–1960ಆಗಿದ್ದು, ಆ ದಿನಾಂಕದಂದು ಇವರು 47 ವರ್ಷಗಳಾಗಿದ್ದು, ಸಹಾಯಕ ನಿರ್ದೇಶಕರು, ನ್ಯಾಯ ವಿಜ್ಞಾನ ಪ್ರಯೋಗಾಲಯದ ಹುದ್ದೆಗೆ ಅರ್ಹರಿರುವುದಿಲ್ಲ. ಈ ಮೇಲ್ಕಂಡ ಕಾರಣಗಳ ಹಿನ್ನೆಲೆಯಲ್ಲಿ ಡಾ.ಎಸ್.ಮಾಲಿನಿರವರು ಸಹಾಯಕ ನಿರ್ದೇಶಕರ ಹುದ್ದೆಗೆ ಸಮರ್ಪಕವಾಗಿಲ್ಲವೆಂದು ಅಭಿಪ್ರಾಯಿಸಿ ಕೆ.ಸಿ.ಎಸ್. (ಪ್ರೊಬೇಷನ್) ನಿಯಮಗಳು, 1977ರ ನಿಯಮ 6ರ ಅಡಿಯಲ್ಲಿ ಇವರನ್ನು General Unsuitability for the Post ಎಂದು ಸೇವೆಯಿಂದ ವಿಮುಕ್ತಿಗೊಳಿಸಲು (ಡಿಸ್‌ಚಾರ್ಜ್) ಡಿಜಿ ಮತ್ತು ಐಜಿಪಿರವರು ಶಿಫಾರಸ್ಸು ಮಾಡಿದ್ದನ್ನು ಪರಿಶೀಲಿಸಿ, ಮೇಲೆ ಓದಲಾದ (3)ರ ಅಧಿಸೂಚನೆಯಲ್ಲಿ ಡಾ.ಎಸ್.ಮಾಲಿನಿರವರು ಪರಿವೀಕ್ಷಣೆ ಅವಧಿಯಲ್ಲಿ ಇದ್ದುದರಿಂದ ಇವರು ಸಹಾಯಕ ನಿರ್ದೇಶಕರು, ನ್ಯಾಯ ವಿಜ್ಞಾನ ಪ್ರಯೋಗಾಲಯ ಹುದ್ದೆಗೆ ಸೂಕ್ತವಾಗಿಲ್ಲವೆಂದು ಪರಿಗಣಿಸಿ, ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣೆ) ನಿಯಮಗಳು, 1977ರ ನಿಯಮ 6(1)ರನ್ವಯ ಸರ್ಕಾರವು ಡಿಸ್‌ಚಾರ್ಜ್ ಮಾಡಲಾಗಿತ್ತು.

ಸರ್ಕಾರದ ಉಲ್ಲೇಖಿತ (3)ರ ಅಧಿಸೂಚನೆ ವಿರುದ್ಧ ಡಾ.ಮಾಲಿನಿಯವರು ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ: 1010/2009 ಅನ್ನು ಸಲ್ಲಿಸಿದ್ದು, ಈ ಬಗ್ಗೆ ಪರಿಶೀಲಿಸಿದ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಮೇಲೆ ಓದಲಾದ (4)ರ ತನ್ನ ಆದೇಶದಲ್ಲಿ ಸರ್ಕಾರದ ಕ್ರಮವನ್ನು ಎತ್ತಿ ಹಿಡಿದು ಡಾ.ಎಸ್.ಮಾಲಿನಿಯವರು ಸಲ್ಲಿಸಿದ ಅರ್ಜಿ ಸಂಖ್ಯೆ:1010/2009 ಅನ್ನು ವಜಾಗೊಳಿಸಿ ಆದೇಶಿಸಿತ್ತು.

ಮಾನ್ಯ ಕೆಎಟಿಯ ಅರ್ಜಿ ಸಂಖ್ಯೆ:1010/2009, ದಿನಾಂಕ: 16–12–2009ರ ಆದೇಶದ ವಿರುದ್ಧ ಡಾ.ಎಸ್.ಮಾಲಿನಿರವರು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 23406/2010 (ಎಸ್–ಕೆಎಟಿ) ಅನ್ನು ದಾಖಲಿಸಿದ್ದು, ಸದರಿ ರಿಟ್ ಅರ್ಜಿಯನ್ನು ಪರಿಶೀಲಿಸಿದ ಮಾನ್ಯ ಉಚ್ಚ ನ್ಯಾಯಾಲಯವು ರಿಟ್ ಅರ್ಜಿಯನ್ನು ಪುರಸ್ಕರಿಸಿ ಮೇಲೆ ಓದಲಾದ (5)ರ ಆದೇಶದಲ್ಲಿ ಈ ಕೆಳಕಂಡಂತೆ ಆದೇಶಿಸಿರುತ್ತದೆ.

The Writ Petition is allowed.

a) The impugned order passed by the Tribunal is hereby set aside.

b) The impugned order of discharge simpliciter (A1) dated 28.02.2009 is hereby quashed.

c) The petitioner is entitled to be reinstated forthwith with all consequential benefits.

d) No costs.

Sd/-

JUDGE

ಕರ್ನಾಟಕ ಉಚ್ಚ ನ್ಯಾಯಾಲಯದ ದಿನಾಂಕ:15–04–2013ರ ಆದೇಶದ ಬಗ್ಗೆ ಸರ್ಕಾರಿ ವಕೀಲರು ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ಎಸ್‌ಎಲ್‌ಪಿ ದಾಖಲಿಸುವಂತೆ ಅಭಿಪ್ರಾಯ ನೀಡಿರುತ್ತಾರೆ.

ಮೇಲೆ ಓದಲಾದ(6)ರ ಆದೇಶದಲ್ಲಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ರಿಟ್ ಪಿಟಿಷನ್ ಸಂಖ್ಯೆ:23406/2010(ಎಸ್–ಕೆಎಟಿ)ಯ ದಿನಾಂಕ: 15–04–2013ರ ತೀರ್ಪಿನ ವಿರುದ್ಧ ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ಎಸ್.ಎಲ್.ಪಿ. ದಾಖಲಿಸಲು ಕ್ರಮಕೈಗೊಳ್ಳಲಾಗಿತ್ತು.

ಮಾನ್ಯ ಸರ್ವೋಚ್ಚ ನ್ಯಾಯಾಲಯವು Special Leave to Appeal (Civil) No.25308/2013ಅನ್ನು ಆದೇಶ ದಿನಾಂಕ:23–08–2013ರ ತನ್ನ ಆದೇಶದಲ್ಲಿ ವಜಾಗೊಳಿಸಿರುತ್ತದೆ.

ಈ ಹಿನ್ನೆಲೆಯಲ್ಲಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ರಿಟ್ ಪಿಟಿಷನ್ ಸಂಖ್ಯೆ:23406/2010(ಎಸ್–ಕೆಎಟಿ)ಯ ದಿನಾಂಕ:15–04–2013ರಲ್ಲಿ ನೀಡಿರುವ ಆದೇಶದನ್ವಯ ಡಾ.ಎಸ್.ಮಾಲಿನಿರವರನ್ನು ನ್ಯಾಯ ವಿಜ್ಞಾನ ಪ್ರಯೋಗಾಲಯ, ಬೆಂಗಳೂರು ಇಲ್ಲಿ ಸಹಾಯಕ ನಿರ್ದೇಶಕರ ಹುದ್ದೆಗೆ ಪುನರ್ ನೇಮಕ ಮಾಡುವ ಬಗ್ಗೆ ಪರಿಶೀಲಿಸಲಾಯಿತು. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಒಇ 47 ಪೊಸಿಲಿ 2012 ಬೆಂಗಳೂರು, ದಿನಾಂಕ: 31–10–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಡಾ.ಎಸ್.ಮಾಲಿನಿ, ಹಿಂದಿನ ಸಹಾಯಕ ನಿರ್ದೇಶಕರು, ಎಫ್.ಎಸ್.ಎಲ್. ನಂ. 14/3, 1ನೇ ಮುಖ್ಯರಸ್ತೆ, ಬ್ರಹ್ಮಪುರಂ, ರಾಮಚಂದ್ರಪುರಂ, ಬೆಂಗಳೂರು–60 ಇವರನ್ನು ನ್ಯಾಯ ವಿಜ್ಞಾನ ಪ್ರಯೋಗಾಲಯ, ಬೆಂಗಳೂರು ಇಲ್ಲಿ ಸಹಾಯಕ ನಿರ್ದೇಶಕರು (ಫೊರೆನ್ಸಿಕ್ ಸೈಕಾಲಜಿ) ಹುದ್ದೆಗೆ ಪುನರ್ ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಎ).

**P.R. 1113**

ಸರ್ಕಾರಿ ಕೇಂದ್ರ ಮುದ್ರಣಾಲಯ, ಘಟಕ–2, ಬೆಂಗಳೂರು